



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರಿ

ಹೊಂಗನಸು – 40

| ಸಂಪುಟ: ೦೫ ಸಂಚಿಕೆ: ೨ | ಮೇ ೨೦೧೮ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 05 Issue 2 | May 2018 | Pages - 8 | A. Sub. - Rs. 20/- | Editor : Sri. B.R. Ravindranath |


# ಶ್ರೀ 'ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ' ಹಾಗೂ 'ಡಾ|| ವಿಜಯಾಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿ'

೧೨-೪-೨೦೧೮ ರಂದು ಸಾಹಿತ್ಯ ಕ್ಷೇತ್ರಕ್ಕೆ ಗಣನೀಯ ಸೇವೆಸಲ್ಲಿಸಿರುವ ಲೇಖಕಿಗೆ ಪ್ರತಿಷ್ಠಾನವು ಕಳೆದ ನಾಲ್ಕು ವರ್ಷಗಳಿಂದಲೂ ನೀಡುತ್ತಿರುವ "ಡಾ|| ವಿಜಯಾ ಸುಬ್ಬರಾಜ್ ಗಣ್ಯಲೇಖಕಿ" ಪ್ರಶಸ್ತಿಯನ್ನು ಈ ಬಾರಿ ಡಾ|| ಎಲ್. ಸಿ.ಸುಮಿತ್ರಾ ಅವರು ಸ್ವೀಕರಿಸಿದರು.

ಬಿಎಂಶ್ರೀ ಪ್ರತಿಷ್ಠಾನವು ಕೊಡುತ್ತಿರುವ ಸೂ.ವೆಂ.ಆರಗ ಅವರ ನೆನಪಿನ "ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ"ಯು ಈ ಬಾರಿ ಡಾ|| ಎಚ್.ಶಶಿಕಲಾ ಅವರಿಗೆ ಅವರ 2018ರಲ್ಲಿ ಪ್ರಕಟಿಸಿರುವ "ಅರ್ಥದಾಚೆಯ ಬೆಡಗು" ಎಂಬ ಕೃತಿಗೆ ಸಂದಿದೆ.

ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ.ನಾರಾಯಣ ಅವರ ಪ್ರಾಸ್ತಾವಿಕ ಮತ್ತು ಸ್ವಾಗತನುಡಿಗಳೊಂದಿಗೆ ಕಾರ್ಯಕ್ರಮ ಆರಂಭವಾಯಿತು.ಡಾ. ಪಿ.ವಿ.ನಾರಾಯಣ ಅವರು ಸಭೆಗೆ ಮೇಲಿನ ಪ್ರಶಸ್ತಿಗಳ ಆಯ್ಕೆ ಸಮಿತಿಯ ಸದಸ್ಯರನ್ನು ಪರಿಚಯಿಸಿ ಸ್ವಾಗತ ಕೋರಿದರು.

ಪ್ರತಿಷ್ಠಾನದ ಕಾರ್ಯದರ್ಶಿಗಳಾದ ಡಾ|| ವಿಜಯಾ ಸುಬ್ಬರಾಜ್, ಪ್ರಶಸ್ತಿ ಪುರಸ್ಕೃತರ ಅಭಿನಂದನಾ ಪತ್ರವನ್ನು ಸಭೆಗೆ ವಾಚನ ಮಾಡಿದರು.ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಪ್ರತಿಷ್ಠಾನದ ಗೌರವಾಧ್ಯಕ್ಷರಾದ ನಾಡೋಜ ಡಾ|| ಎಂ.ಎಚ್.ಕೃಷ್ಣಯ್ಯನವರು ಪ್ರಶಸ್ತಿ ಪ್ರದಾನ ಮಾಡಿದರು. ಡಾ|| ಕೃಷ್ಣಯ್ಯನವರು ತಮ್ಮ ನೆನಪಿನಾಳದಿಂದ, ಸೂ.ವೆಂ.ಆರಗ ಅವರೊಂದಿಗಿನ ಒಡನಾಟವನ್ನು ಹಂಚಿಕೊಂಡರು.

ಡಾ|| ಶಶಿಕಲಾ ಭಾಷಾವಿಜ್ಞಾನದಲ್ಲಿ ಭಾಷಾ ಬೋಧನೆಯ ಸ್ವರೂಪದ ಬಗ್ಗೆ ಅವರ ಪರಿಶ್ರಮವನ್ನು ಸಭೆಗೆ ಸಂಕ್ಷಿಪ್ತವಾಗಿ ಪರಿಚಯ ಮಾಡಿದರು.ಡಾ|| ಎಲ್.ಸಿ.ಸುಮಿತ್ರ ಅವರು ತಮ್ಮ ನೆನಪುಗಳನ್ನು ಹಂಚಿಕೊಂಡರು.

ಶ್ರೀ ರವೀಂದ್ರನಾಥ್ ಅವರು ವಂದನಾರ್ಪಣೆ ಮಾಡಿದರು





**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–
ಐದು ವರ್ಷಗಳ ಚಂದಾ
ರೂ. ೧೦೦/–


ವಿಳಾಸ

**ಬಿ.ಎಂ.ಶ್ರೀ. ಪ್ರತಿಷ್ಠಾನ**
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ

## ಸಂಪಾದಕೀಯ

ಕರ್ನಾಟಕದಲ್ಲಿ ಚುನಾವಣೆಯ ಕಾವು ಏರುತ್ತಲಿದೆ.ಅಧಿಕಾರದ ಲಾಲಸೆಯಿಂದ ಪೀಡಿತರಾದ ಆಕಾಂಕ್ಷಿಗಳು ವಿಧವಿಧ ರೂಪದಲ್ಲಿ ಆಮಿಷಗಳನ್ನು ತೋರಿಸಿ ಮತಯಾಚನೆ ಮಾಡುತ್ತಿದ್ದಾರೆ. ಒಂದು ರಾಜಕೀಯ ಪಕ್ಷದಲ್ಲಿ ಟಿಕೆಟ್ ದೊರೆಯದಿದ್ದರೆ ಇನ್ನೊಂದು ಪಕ್ಷಕ್ಕೆ ಹಾರಿ ಟಿಕೆಟ್ ದೊರಕಿಸಿಕೊಳ್ಳುವುದು ಸರ್ವೇಸಾಮಾನ್ಯವಾಗಿದೆ. ಅಲ್ಲಿ ಸಲ್ಲದಿರುವವನು ಇಲ್ಲಿ ಸಲ್ಲುತ್ತಾನೆ.

ನಮ್ಮ ರಾಜ್ಯದಲ್ಲಿ ಪ್ರಮುಖ ರಾಜಕೀಯ ಪಕ್ಷಗಳು ಬಲವಾಗಿ ಬೇರೂರಿವೆ. ನಮ್ಮ ರಾಜ್ಯದ ಜನತೆಗೆ ಪ್ರಮುಖ ರಾಜಕೀಯ ಪಕ್ಷಗಳ ಬಗ್ಗೆ ಮಾತ್ರ ನಂಬಿಕೆ ಇದೆ ಎಂದು ಸಾಬೀತಾಗಿದೆ. ಹೀಗಾಗಿ ನಮ್ಮ ರಾಜ್ಯದಲ್ಲಿ ಸ್ವತಂತ್ರ ಅಭ್ಯರ್ಥಿಗಳಿಗೆ ಹಾಗೂ ಹೊಸ ರಾಜಕೀಯ ಪಕ್ಷಗಳಿಗೆ ಮನ್ನಣೆ ದೊರಕುತ್ತಿಲ್ಲ. ನಮ್ಮ ರಾಜ್ಯದ ಜನರು ರಾಜಕೀಯ ಪಕ್ಷವನ್ನು ನಂಬಿ ಆ ಪಕ್ಷದ ಅಭ್ಯರ್ಥಿಗೆ ಮತ ಹಾಕುತ್ತಾರೆ. ನಮ್ಮ ಜನತೆಯ ಈ ನಂಬಿಕೆಯನ್ನೆ ಪ್ರಮುಖ ರಾಜಕೀಯ ಪಕ್ಷಗಳು ದುರ್ಬಳಸುತ್ತಿವೆ.

ನಮ್ಮ ರಾಜ್ಯದಲ್ಲಿ ಪ್ರಮುಖ ರಾಜಕೀಯ ಪಕ್ಷಗಳ ಅಭ್ಯರ್ಥಿಗಳನ್ನು ಯಾವುದೇ ಮಾನದಂಡವನ್ನು ಪಾಲಿಸದೇ ಪ್ರಜಾಪ್ರಭುತ್ವದ ತತ್ವಗಳನ್ನು ಗಾಳಿಗೆ ತೂರಿ ತಮಗೆ ಬೇಕಾಗಿರುವ ತಾವು ಆರಿಸಿರುವ ಅಭ್ಯರ್ಥಿಗಳನ್ನು ಪಕ್ಷಗಳ ಪ್ರಮುಖ ನಾಯಕರು ಪ್ರಜೆಗಳ ಮೇಲೆ ಹೇರಿರುತ್ತಾರೆ. ನಮ್ಮ ರಾಜ್ಯದ ಮತದಾರರ ಮನಸ್ಥಿತಿಯನ್ನು ಅರಿತಿರುವ ರಾಜಕೀಯ ಪಕ್ಷಗಳ ಪ್ರಮುಖರು ರಾಜ್ಯದ ಜನತೆಗೆ ಒಳಿತು ಮಾಡುವುದರ ಬಗ್ಗೆಯಾಗಲಿ, ಕನ್ನಡದ ಬಗ್ಗೆ ಕಳಕಳಿ ಇರುವುದರ ಬಗ್ಗೆಯಾಗಲೀ ಯಾವುದೇ ರೀತಿಯಲ್ಲಿ ತಲೆ ಕೆಡಿಸಿಕೊಂಡಿರುವ ಹಾಗೆ ಕಾಣುವುದಿಲ್ಲ.

ಯಾವುದೇ ರಾಜಕೀಯ ಪಕ್ಷಕ್ಕೆ, ಟಿಕೆಟ್‌ಗಾಗಿ ದುಂಬಾಲು ಬೀಳದಿರುವ, ಹಣ ಬಲದಿಂದ ಮೆರೆಯದಿರುವ, ಯಾರ ಹಂಗು ಇಲ್ಲದೇ ಸ್ವತಂತ್ರವಾಗಿ ಜನರಿಗೆ ಸೇವೆ ಮಾಡುತ್ತಿರುವ ಒಬ್ಬನೇ ಒಬ್ಬ ಅಭ್ಯರ್ಥಿಯೂ ಲಭ್ಯವಾಗಿಲ್ಲ ಎಂಬುದು ಗಮನಿಸಬೇಕಾಗಿರುವ ಸಂಗತಿಯಾಗಿರುತ್ತದೆ.

ಪ್ರಜ್ಞಾವಂತ ಮತದಾರರಿಗೆ ದಿಕ್ಕು ತೋರದಂತಹ ಪರಿಸ್ಥಿತಿ ನಿರ್ಮಾಣವಾಗಿರುವುದನ್ನು ಕಾಣುತ್ತಿದ್ದೇವೆ. ಒಂದು ಕಡೆ ಮತದಾನ ಮಾಡುವುದು ನಮ್ಮ ಕರ್ತವ್ಯ ಎಂಬ ನಂಬಿಕೆ. ಇನ್ನೊಂದೆಡೆ ನಂಬಿಕೆಗೆ ಅರ್ಹರಲ್ಲದ ಅಭ್ಯರ್ಥಿಗಳ ಉಮೇದುವಾರಿಕೆ. ತನ್ನ ಅಮೂಲ್ಯ ಮತವನ್ನು ಪಡೆಯಲು ಯಾವ ಅಭ್ಯರ್ಥಿಯೂ ಅರ್ಹನಾಗಿಲ್ಲವಲ್ಲ ಎಂಬ ಹತಾಶೆ. ಯಾವ ಅಭ್ಯರ್ಥಿಗೂ ಮತ ಹಾಕಬಾರದೆಂದು ನಿರ್ಧರಿಸಿ ಮೇಲ್ಕಂಡವರೂ ಯಾರೂ ಬೇಡ ಎಂಬ ನನ್ ಆಫ್ ದಿ ಅಬೌವ್ ಆಯ್ಕೆಗೆ ಮತ ಹಾಕಿದರೂ ಅತಿ ಹೆಚ್ಚು ಮತ ಗಳಿಸಿದ, ನಮಗೆ ಬೇಡವಾಗಿರುವ ಅಭ್ಯರ್ಥಿಯೇ ಗೆಲ್ಲುತ್ತಾನೆ.

ಈಗಿನ ಪದ್ದತಿಯಲ್ಲಿ ನಮಗೆ ಲಭ್ಯವಿರುವುದು ಕೇವಲ ಸಕಾರಾತ್ಮಕ ಮತ. ನಾವು ಹಾಕುವ ಮತದಿಂದ ಒಬ್ಬ ಅಭ್ಯರ್ಥಿಗೆ ಜಯಗಳಿಸಲು ಬೆಂಬಲ ದೊರಕುತ್ತದೆ. ಆದರೆ ಈ ಸನ್ನಿವೇಶದಲ್ಲಿ ನಮಗೆ ಬೇಕಾಗಿರುವುದು ಕೇವಲ ಸಕಾರಾತ್ಮಕ ಮತಗಳಲ್ಲ. ನಮಗೆ ನಕಾರಾತ್ಮಕ ಮತಗಳ ಅಗತ್ಯವಿದೆ. ನಮಗೆ ಬೇಡವಾದ ಅಭ್ಯರ್ಥಿಯನ್ನು ನಮ್ಮ ಮೇಲೆ ಹೇರಬೇಡಿ ಎಂದು ರಾಜಕೀಯ ಪಕ್ಷಗಳಿಗೆ ತಿಳಿಸಬೇಕಾದ ಅನಿವಾರ್ಯತೆ ಕಂಡುಬರುತ್ತಿದೆ.

ಈ ತಿಂಗಳಿನಿಂದ 'ಹೊಂಗನಸು' ವಿನಲ್ಲಿ ಎರಡು ಹೊಸ ಅಂಕಣಗಳನ್ನು ಆರಂಭಿಸುತ್ತಿದ್ದೇವೆ. ನಮ್ಮ ಪ್ರತಿಷ್ಠಾನದ ಸ್ಥಾಪಕರಾದ ಪ್ರೊ. ಎಂ ವಿ ಸೀತಾರಾಮಯ್ಯ ಅವರ ಜೀವನ ಚರಿತ್ರೆಯು ಧಾರಾವಾಹಿಯಾಗಿ ಡಾ. ಪಿ.ವಿ. ನಾರಾಯಣ ಅವರ ಲೇಖನಿಯಿಂದ ಮೂಡಿಬರಲಿದೆ. ಜೊತೆಗೆ "ಅವಲೋಕನ" ಅಂಕಣದಲ್ಲಿ ಸಾಹಿತ್ಯ ಕೃತಿಗಳ ವಿಮರ್ಶೆಗಳನ್ನು ಪ್ರಕಟಿಸಲಾಗುತ್ತದೆ. ಹೊಂಗನಸು ಓದುಗರೂ ವಿಮರ್ಶಾ ಲೇಖನಗಳನ್ನು ಕಳುಹಿಸಬಹುದು.

**ಬಿ.ಆರ್ ರವೀಂದ್ರನಾಥ್**
ಸಂಪಾದಕರು

## ಪ್ರಕಟಣೆ

ಕನ್ನಡ ಭಾಷೆಯಲ್ಲಿ ಹೊಸದಾಗಿ ಅಂದರೆ ಕಳೆದ ಮೂರು ತಿಂಗಳುಗಳ ಅವಧಿಯಲ್ಲಿ ಪ್ರಕಟಗೊಳ್ಳುವ ಸಾಹಿತ್ಯ ಕೃತಿಗಳನ್ನು ಹೊಂಗನಸು ಓದುಗರ ಗಮನಕ್ಕ ತರುವ ಉದ್ದೇಶದಿಂದ ನಾವು ಹೊಸ ಅಂಕಣವನ್ನು ಆರಂಭಿಸುತ್ತಿದ್ದೇವೆ. ಈ ಅಂಕಣದಲ್ಲಿ ಹೊಸದಾಗಿ ಪ್ರಕಟವಾದ ಸಾಹಿತ್ಯಕೃತಿಗಳ ವಿವರಗಳನ್ನು ಪ್ರಕಟಿಸಲಾಗುವುದು.ಆಸಕ್ತ ಲೇಖಕರು ಕಳೆದ ಮೂರು ತಿಂಗಳುಗಳ ಅವಧಿಯಲ್ಲಿ ಪ್ರಕಟಗೊಂಡ ತಮ್ಮ ಕೃತಿಗಳನ್ನು ಗೌರವ ಕಾರ್ಯದರ್ಶಿ, ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು ಇಲ್ಲಗೆ ಕಳಿಸಿಕೊಡಬಹುದು.

## 'ಅವಲೋಕನ'

ಸಾಹಿತಿಗಳ ಗಮನಕ್ಕೆ --ನೀವು ರಚಿಸಿದ ಸಾಹಿತ್ಯ ಕೃತಿಯ ವಿಮರ್ಶೆಯನ್ನು ಪ್ರಕಟಿಸಬೇಕೆ?
ಕನ್ನಡ ಭಾಷೆಯಲ್ಲಿ ಹೊಸದಾಗಿ ಅಂದರೆ ಕಳೆದ ಮೂರು ತಿಂಗಳುಗಳ ಅವಧಿಯಲ್ಲಿ ಪ್ರಕಟಗೊಳ್ಳುವ ಮೌಲಿಕ ಸಾಹಿತ್ಯ ಕೃತಿಗಳನ್ನು ಹೊಂಗನಸು ಓದುಗರಿಗೆ ಪರಿಚಯಿಸುವ ಉದ್ದೇಶದಿಂದ ನಾವು ಹೊಸ ಅಂಕಣವನ್ನು ಆರಂಭಿಸುತ್ತಿದ್ದೇವೆ.ಈ ಶೀರ್ಷಿಕೆಯಡಿಯಲ್ಲಿ ಪ್ರತಿ ತಿಂಗಳೂ ಹೊಂಗನಸುವಿನಲ್ಲಿ 'ಅವಲೋಕನ' ಅಂಕಣದಲ್ಲಿ ಹೊಸದಾಗಿ ಪ್ರಕಟವಾದ ಮೌಲಿಕವಾದ ಸಾಹಿತ್ಯ ಕೃತಿಗಳ ವಿಮರ್ಶೆಗಳನ್ನು ಪ್ರಕಟಿಸಲಾಗುವುದು. ಆಸಕ್ತ ಲೇಖಕರು ಕಳೆದ ಮೂರು ತಿಂಗಳುಗಳ ಅವಧಿಯಲ್ಲಿ ಪ್ರಕಟಗೊಂಡ ಕೃತಿಗಳ ಒಂದು ಪ್ರತಿಯನ್ನು ನಮಗೆ ತಲುಪಿಸಬಹುದು. ಈ ಅಂಕಣಕ್ಕಾಗಿ ಸ್ವೀಕರಿಸಿದ ಯಾವುದೇ ಕೃತಿಗಳ ಪ್ರತಿಗಳನ್ನು ಹಿಂದಿರುಗಿಸಲಾಗುವುದಿಲ್ಲ.

## ಮೇ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಬಿ.ಪುಟ್ಟಸ್ವಾಮಯ್ಯ | ೨೪-೫-೧೮೯೭ |
| ಆನಕೃ | ೯-೫-೧೯೦೮ |
| ಭಾರತಿ ಸುತ (ಶಾನಭಾಗ್ ರಾಮಡು ನಾರಾಯಣರಾವ್) | ೧೫-೫-೧೯೧೫ |
| ಶಂಕರ ಮೊಕಾಶಿ ಪುಣೇಕರ | ೧೫-೫-೧೯೨೮ |

## ಮೇ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಕಡೆಂಗೊಡ್ಲುಶಂಕರ ಭಟ್ಟ | ೧೭-೫-೧೯೬೮ |
| ಡಿಎಲ್ ನರಸಿಂಹಚಾರ್ಯ | ೮-೫-೧೯೭೧ |

## ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/- (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/- ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.

## ಕೋರಿಕೆ

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. ೨೦/ - ಆಗಿದ್ದು ಐದು ವರ್ಷಗಳ ಚಂದಾಹಣ ರೂ, ೧೦೦/- ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

# ಮೇ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು
## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಪ್ರತಿಷ್ಠಾನ



### ೦೯-೦೫-೨೦೧೮ ಬುಧವಾರ ಸಂಜೆ- ೬-೦೦ ಗಂಟೆಗೆ
"ಅಕ್ಕರಗೊಟ್ಟಿ"
ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ
ವಿಷಯ : 'ಅಜ್ಞಾತ ಕವಯಿತ್ರಿ ಶ್ರೀಮತಿ' – ಒಂದು ಚರ್ಚೆ
ಚಾಲನೆ ನೀಡುವವರು : ಡಾ॥ ಸಂಧ್ಯಾ .ವಿ



### ೧೨-೫-೨೦೧೮ ಶನಿವಾರ ಸಂಜೆ – ೬-೦೦ಗಂಟೆಗೆ
ಡಿವಿಜಿ, ಕ.ವೆಂ.ರಾಘವಾಚಾರ್, ಬಿ.ಎಸ್.ಸಣ್ಣಯ್ಯ, ಎಂ.ಎಲ್. ಲಲಿತಮ್ಮ ದತ್ತಿ
ವಿಷಯ : 'ಪತ್ರಕರ್ತ ಡಿವಿಜಿ'
ಉಪನ್ಯಾಸ : ಶ್ರೀ ಎಸ್. ದಿವಾಕರ್
(ಪ್ರಖ್ಯಾತ ಲೇಖಕರು, ಪತ್ರಕರ್ತರು)



### ೧೯-೦೫-೨೦೧೮ ಶನಿವಾರ ಸಂಜೆ – ೪-೦೦
ವೈಯಾಕರಣಿ ಗರಣಿ ಕೃಷ್ಣಾಚಾರ್ಯ ದತ್ತಿ
'ಹಳಗನ್ನಡ ಡಿಪ್ಲೊಮ'
ಪ್ರಮಾಣ ಪತ್ರ ವಿತರಣೆ
ಅತಿಥಿಗಳು : ಪ್ರೊ॥ ಜಿ.ಎಸ್. ಸಿದ್ಧಲಿಂಗಯ್ಯ
(ಪ್ರಖ್ಯಾತ ಕವಿಗಳು, ವಿದ್ವಾಂಸರು)
ಏಕವ್ಯಕ್ತಿ ಅಭಿನಯ ಸಂಜೆ : ೫-೩೦ ಗಂಟೆಗೆ
'ಸಿಂಗಾರವ್ವ ಮತ್ತು ಅರಮನೆ'
ಅಭಿನೇತ್ರಿ : ಪ್ರೊ॥ ಲಕ್ಷ್ಮೀಚಂದ್ರಶೇಖರ್

### ೨೮-೦೫-೨೦೧೮ ಸೋಮವಾರ ಸಂಜೆ ೬-೦೦ ಗಂಟೆಗೆ
'ಸಾಹಿತ್ಯ ವಿಹಾರ'-೩
ಸಾಕ್ಷ್ಯಚಿತ್ರ ಪ್ರದರ್ಶನ

### ಶ್ರೀಮತಿ ಎಸ್.ರಮಾದೇವಿ ವಿಶ್ವೇಶ್ವರಯ್ಯನವರಿಗೆ ಗೌರವ ಡಾಕ್ಟರೇಟ್




ನಮ್ಮ ಪ್ರತಿಷ್ಠಾನದ ಸಕ್ರಿಯ ಸದಸ್ಯರಾಗಿರುವ ಶ್ರೀಮತಿ ಎಸ್.ರಮಾದೇವಿ ವಿಶ್ವೇಶ್ವರಯ್ಯನವರಿಗೆ ಕಳೆದ ಮಾರ್ಚ್ ೧೭ರಂದು ಪುಣೆಯಲ್ಲಿ ಇಂಡಿಯನ್ ವರ್ಚುಯಲ್ ಅಕಾಡೆಮಿ ಅವರು ಗೌರವ ಡಾಕ್ಟ-ರೇಟ್ ಪದವಿ ಪ್ರದಾನ ಮಾಡಿ ಸನ್ಮಾನಿಸಿರುತ್ತಾರೆ. ಶ್ರೀಮತಿ ಎಸ್. ರಮಾದೇವಿ ವಿಶ್ವೇಶ್ವರಯ್ಯನವರಿಗೆ ಅಭಿನಂದನೆಗಳು.

### ಸಾಹಿತ್ಯವಿಹಾರ
೨೧-೩-೨೦೧೮ ರಂದು ಸಾಹಿತ್ಯವಿಹಾರ ಕಾರ್ಯಕ್ರಮದಲ್ಲಿ ಸಾರಅಬೂಕರ್ ಮತ್ತು ನೀಳಾದೇವಿ ಅವರ ಬಗ್ಗೆಯ ಸಾಕ್ಷ್ಯಚಿತ್ರಗಳನ್ನು ಪ್ರದರ್ಶಿಸಲಾಯಿತು.

### ಶ್ರದ್ಧಾಂಜಲಿ.
**ಚಿತ್ರರಂಗದ ಹಿರಿಯ ನಿರ್ದೇಶಕ ಶ್ರೀ ಟಿ.ಎಸ್. ರಂಗಾ ನಿಧನ**

ರಂಗಭೂಮಿ ಮತ್ತು ಸಿನಿಮಾ ಕ್ಷೇತ್ರಗಳನ್ನು ಅಭಿವ್ಯಕ್ತಿಯ ಮಾಧ್ಯಮವನ್ನಾಗಿಸಿ ಕೊಂಡವರು ಶ್ರೀಟಿ.ಎಸ್.ರಂಗಾ.ಇವರು ಹಲವಾರು ಸಾಕ್ಷ್ಯಚಿತ್ರಗಳ ಹಾಗೂ ಚಲನಚಿತ್ರಗಳ ನಿರ್ಮಾಣ ಮತ್ತು ನಿರ್ದೇಶನದಲ್ಲೂ ಹೆಸರು ಮಾಡಿದ್ದರು. ಪ್ರತಿಷ್ಠಾನದಲ್ಲಿ ಕಳೆದ ವರ್ಷ ಪ್ರಾಯೋಗಿಕವಾಗಿ ರೂಪಿಸಿದ "ಕೃತಿ-ಚಿತ್ರ" ಕಾರ್ಯಕ್ರಮಕ್ಕೆ ತಾವೇ ನಿರ್ದೇಶಿಸಿದ ರಾಜ್ಯ ಪ್ರಶಸ್ತಿ ಪಡೆದ ಸಾವಿತ್ರಿ ಚಿತ್ರದ ಪ್ರತಿಯೊಂದನ್ನು ನೀಡಿ, ಕಾರ್ಯಕ್ರಮದ ಸಂವಾದದಲ್ಲೂ ಭಾಗವಹಿಸಿ ಸಹಕರಿಸಿದ್ದರು. ರಂಗಾ ಅವರು ದಿನಾಂಕ ೮-೪-೨೦೧೮ರಂದು ತಮ್ಮ ಸ್ವಗೃಹದಲ್ಲಿ ಹೃದಯಾಘಾತದಿಂದ ನಿಧನರಾದರು. ಪ್ರತಿಷ್ಠಾನವು ಅವರ ಆತ್ಮಕ್ಕೆ ಸದ್ಗತಿ ದೊರಕಲೆಂದು ಪ್ರಾರ್ಥಿಸುತ್ತದೆ.

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

## ‘ಅಕ್ಕರಗೊಟ್ಟಿ’
## ೨೮-೦೩-೨೦೧೮



ವಿಷಯ: ‘ಕನ್ನಡ ವಂಶ” ಒಂದು ಚಿಂತನೆ

ಚಾಲನೆ ನೀಡಿದವರು : ಪ್ರೊ. ಜಿ.ಕೆ. ದೇವರಾಜ ಸ್ವಾಮಿ

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಸ್ನಾತಕೋತ್ತರ ವಿಭಾಗ, ಚನ್ನಪಟ್ಟಣದಲ್ಲಿ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿರುವ ಪ್ರೊ॥ ದೇವರಾಜಸ್ವಾಮಿಯವರ ಪರಿಚಯವನ್ನು ಡಾ॥ ವಿಜಯಾ ಸುಬ್ಬರಾಜ್ ಅವರು ಸಭೆಗೆ ಮಾಡಿಕೊಟ್ಟರು. ಹಾಗೂ ಶಾಸನ ಮತ್ತು ಸ್ಮಾರಕಗಳ ಬಗ್ಗೆ ಶ್ರೀಯುತರ ಸಾಧನೆಗಳನ್ನು ಸಭೆಗೆ ತಿಳಿಸಿದರು.

ಮಹಾಭಾರತದ ಕೆಲವು ಪರ್ವಗಳಲ್ಲಿ, ಪಾಣಿನೀಯ ಅಷ್ಟಾಧ್ಯಾಯಿ, ವರಾಹಮಿಹಿರನ ಬೃಹತ್ ಸಂಹಿತೆ, ಮತ್ತು ಹಲವಾರು ಮಹಾಪುರಾಣಗಳಲ್ಲಿ ಕರ್ಣಾಟಕ/ಕರ್ನ್ನಾಟಕ ಪದಗಳ ಉಲ್ಲೇಖವಿರುವ ಸಂದರ್ಭಗಳನ್ನು ನೀಡಿ, ನಂತರ ಕೆಲವು ಕನ್ನಡ ಸಾಹಿತ್ಯಗಳಲ್ಲೂ ಮತ್ತು ಲಕ್ಷಣಶಾಸ್ತ್ರ ಗ್ರಂಥಗಳಲೂ ಉಲ್ಲೇಖವಿರುವುದಾಗಿ, ದೃಷ್ಟಾಂತದೊಂದಿಗೆ ಪ್ರೊ॥ ದೇವರಾಜಸ್ವಾಮಿಯವರು ಮಾಹಿತಿ ನೀಡಿದರು.

ಶಾಸನ ಸಾಹಿತ್ಯದಲ್ಲಿ ಮೊದಮೊದಲು ಕೆಲವು ಶಾಸನಗಳಲ್ಲಿ ಕರ್ಣಾಟ ದೇಶ ಮತ್ತು ಭಾಷೆ ಎಂಬ ಶಬ್ದಗಳ ಬಳಕೆಯ ಉದಾರಣೆಗಳನ್ನು ನೀಡಿ, ಕರ್ಣಾಟ-ಭೂಮೀಭುಜ-ಭೂಮೀಪತಿ, ‘ಕರ್ನಾಟಕ’ ಶಬ್ದದ ಬಳಕೆ, ಕರ್ನಾಟಕ ಜನ-ಜನಪದ, ಕರ್ನಾಟಕ ರಾಜ್ಯ, ಕರ್ನಾಟಕರಸ, ಕರ್ನಾಟಕ ಸಾಮ್ರಾಜ್ಯ, ಕರ್ನಾಟಕ ಸಿಂಹಾಸನ, ಕರ್ನಾಟಕ ಲಕ್ಷ್ಮೀ, ಕರ್ನಾಟಕ ವಿದ್ಯಾವಿಲಾಸ, ಕರ್ನಾಟಕ ವಾಕ್, ಕರ್ಣ್ನಾಟದೇಶ, ಕರ್ಣ್ನಾಟಕದವರು, ಕರ್ಣಾಟಕ ರಾಜ್ಯಂ, ಕರ್ನಾಟಕ ವಿಷಯ, ಕನ್ನಡಿಗ ವೀರ ಪಾಂಚಾಳ, ಕನ್ನಡಿಗ ಮನೆಯಾಳ್ವ(ತನ) ಕನಡೇಶ್ವರ, ಕರ್ಣಾಟೇಶ್ವರ, ಕನ್ನನಾಡು ಶಬ್ದಗಳ ಬಳಕೆಯಾಗಿರುವುದನ್ನು ಮತ್ತು ಔಚಿತ್ಯವನ್ನು ಶಾಸನಗಳ ವಿವರಗಳೊಂದಿಗೆ ವಿವರಿಸಿದರು.

ಹನ್ನೆರಡನೇ ಶತಮಾನದ ಕಲ್ಯಾಣ ಕ್ರಾಂತಿಯ ನಂತರ, ಕರ್ಣ್ನಾಟಕ ಶಬ್ದದ ಬಳಕೆ ಕೈಬಿಟ್ಟು ‘ಕನ್ನಡ’ ಶಬ್ದದ ಬಳಕೆಯಾಗಿರುವುದನ್ನು ಕಾಣಬಹುದೆಂದು ಉದಾಹರಣೆಯೊಂದಿಗೆ ಹಲವಾರು ಶಾಸನಗಳನ್ನು ಉಲ್ಲೇಖಿಸಿದರು.

ಬಿದರ್‌ನ ಶಾಸನ ಸಂಖ್ಯೆ೩ ರಲ್ಲಿ ಕಂನಡ ಸರಸ್ವತಿ(೧೨-೧೩ನೇ ಶತಮಾನ), ಸಿಂದನೂರು (ಕ್ರಿ.ಶ. ೧೦೮೫) ಶಾಸನದಲ್ಲಿ ಕನ್ನಡ ಶಿಖಾಮಣಿ, ಕಂನಡ ಜಾಣ(ಕಳಚೂರಿ ಶಾಸನಹ್ರ ೧೧೭೨), ಕನ್ನಡದ ಉಪಾಧ್ಯಾಯ(ತಾಳಗುಂದ ಶಾಸನ ಕಳಚೂರಿ೧೧೫೭), ಆಂಧ್ರಪ್ರದೇಶದ ಶಾಸನಗಳಲ್ಲಿ ಕನ್ನಡ ಸನ್ದಿ ವಿಗ್ರಹಿ ಪದಗಳ ಬಳಕೆ, ‘ಕರ್ಣಾಟಕುಲ’ ಪದಗಳ ಬಳಕೆ ಹಾಸನ ಜಿಲ್ಲೆಯ ಕೆಲವು ಶಾಸನಗಳಲ್ಲಿ ಕಾಣಬಹುದೆಂದು ಶಾಸನಗಳನ್ನೂ ಉಲ್ಲೇಖಿಸಿದರು.

ಕನ್ನಡ ವಂಶ, ಕರ್ಣಾಟ ವಂಶ ಪದಗಳ ಬಳಕೆ ಮಾಡಿರುವ ಶಾಸನಗಳ ಸ್ಥಳ, ಸಮಯ ಮತ್ತು ಆಗಿನ ರಾಜವಂಶರ ಬಗ್ಗೆ ಪ್ರಸ್ತಾವಿಸಿ ಒಮ್ಮಿಂದೊಮ್ಮೆಲೇ ಈ ಪದಗಳನ್ನು ಬಳಕೆಯಾಗಿರುವ ಬಗ್ಗೆ ಕಾರಣವೇನು ಅನ್ನುವುದೇ ಈ ಚರ್ಚೆಯ ಮುಖ್ಯ ಉದ್ದೇಶವಾದ್ದರಿಂದ ಚರ್ಚೆಗೆ, ಅನುವು ಮಾಡಿಕೊಡಲಾಯಿತು.ಈ ಚರ್ಚೆಯಿಂದಾಗಿ ಕೇಳಿ ಬಂದ ಕೆಲವು ಕಾರಣಗಳನ್ನು ಪರಿಶೀಲಿಸಬೇಕೆಂಬ ಅಭಿಪ್ರಾಯ ವ್ಯಕ್ತವಾಯಿತು.

೧. ಹನ್ನೆರಡನೆಯ ಶತಕದಲ್ಲಿ ವೀರಶೈವ ವಚನಕಾರರು ಜನ ಸಾಮಾನ್ಯರನ್ನೂ ಬಿರುಸಿನಿಂದ ವೀರಶೈವ ಧರ್ಮದ ಬಗ್ಗೆ ಪ್ರಚಾರ ಕೈಗೊಂಡಿದ್ದರಿಂದ ಮತ್ತು ವೈದಿಕ ಭಾಷೆಯಾದ ಸಂಸ್ಕೃತವನ್ನು ಕಡೆಗಣಿಸುವ ದೃಷ್ಟಿಯಿಂದ.

೨.ಕನ್ನಡ ಭಾಷೆಯ ಪ್ರಭಾವ ವಚನಗಳಲ್ಲಿ ಸ್ಪಷ್ಟವಾಗಿ ಗೋಚರಿಸಿದ್ದರಿಂದ.

೩.ಮತಾಂತರದ ಕಾರಣದಿಂದಾಗಿ ಈ ಪದಗಳ ಬಳಕೆಯಾಗಿರುವ ಸಾಧ್ಯತೆ.

೪.ಕನ್ನಡದ ಅಸ್ಮಿತೆಗೆ ಕಂಟಕವಾಗುವುದೆಂಬ ಭೀತಿಯಿಂದ, ಈ ಪದಗಳ ಬಳಕೆಯಾಗಿರುವ ಸಾಧ್ಯತೆ.

“ಕನ್ನಡ ವಂಶ” “ಕರ್ಣಾಟಕ ವಂಶ”- ಈ ಶಬ್ದಗಳ ಬಳಕೆಯ ಕಾರಣವನ್ನು ತಿಳಿಯಲು ಇನ್ನೂ ಹೆಚ್ಚಿನ ಸಂಶೋಧನೆಗೆ ಅವಕಾಶವಿರುವ ಅಭಿಪ್ರಾಯಕ್ಕೆ ಬರಲಾಯಿತು.

ಕಾರ್ಯಕ್ರಮಕ್ಕೆ ಚಾಲನೆ ನೀಡಿದವರಿಗೂ ಮತ್ತು ಚರ್ಚೆಯಲ್ಲಿ ಭಾಗವಹಿಸಿದ ಎಲ್ಲಾ ವಿದ್ವಾಂಸರಿಗೂ, ಶ್ರೀ ಬಿ.ಎಸ್.ಗುರುಪ್ರಸಾದ್, ಸಂಯೋಜನಾಧಿಕಾರಿಗಳು ವಂದಿಸಿದರು.

## ಸಂಶೋಧನ ದಿನ

ಹಂಪಿ ವಿಶ್ವವಿದ್ಯಾಲಯದಿಂದ ಎಂ.ಫಿಲ್ ಮತ್ತು ಪಿ.ಎಚ್‌ಡಿ ಪರೀಕ್ಷೆಗಳಲ್ಲಿ ಉತ್ತೀರ್ಣರಾದವರಿಗೆ ಪ್ರತಿಷ್ಠಾನವು ಪ್ರಮಾಣ ಪತ್ರ ಮತ್ತು ಅಂಕಪಟ್ಟಿಗಳನ್ನು ಒಂದು ಸಮಾರಂಭದಲ್ಲಿ ವಿತರಣೆ ಮಾಡುವ ಪರಿಪಾಟವನ್ನು ನಡೆಸಿಕೊಂಡುಬರುತ್ತಿದೆ. ಈ ಸಮಾರಂಭವೇ “ಸಂಶೋಧನ ದಿನ” ವೆಂದು ಕರೆಯಲಾಗುತ್ತಿದ್ದು, ವಿದ್ಯಾರ್ಥಿಗಳು ಮತ್ತು ಉಪನ್ಯಾಸಕರು ತರಗತಿಯ ವಾತಾವರಣವಿಲ್ಲದೇ ಒಂದೆಡೆ ಕೂಡಿ, ಇಬ್ಬರ ಪರಿಶ್ರಮದ ಫಲವಾಗಿ, ವಿದ್ಯಾರ್ಥಿಗಳು ಪ್ರಮಾಣ ಪತ್ರಗಳನ್ನು ಸ್ವೀಕರಿಸುತ್ತಾರೆ ಮತ್ತು ಉಪನ್ಯಾಸಕರು ಹೆಮ್ಮೆ ಪಡುತ್ತಾರೆ.ಅಂತಹುದೇ



ಕಾರ್ಯಕ್ರಮದಲ್ಲಿ ದಿನಾಂಕ ೧೬-೪-೨೦೧೮ ರಂದು ನಾಲ್ಕು ವಿದ್ಯಾರ್ಥಿಗಳು ತಮ್ಮ ಎಂ.ಫಿಲ್ ಪ್ರಮಾಣ ಪತ್ರಗಳನ್ನು ಸ್ವೀಕರಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಡಾ.ಸಿ.ನಾಗಭೂಷಣ, ಮುಖ್ಯಸ್ಥರು, ಕೋಲಾರ ಕನ್ನಡ ಸ್ನಾತಕೋತ್ತರ ಕೇಂದ್ರ ಅವರು ವಹಿಸಿಕೊಂಡು ಪ್ರಮಾಣಪತ್ರಗಳನ್ನು ವಿದ್ಯಾರ್ಥಿಗಳಿಗೆ ವಿತರಿಸಿದರು. ಶ್ರೀಮತಿ ಶ್ರುತಿ ಕೆ.ಆರ್.ಅವರು ಹೆಚ್ಚಿನ ಅಂಕಗಳಿಸಿ, ಪ್ರತಿಷ್ಠಾನ ನೀಡುವ ರೂ. ೨,೦೦೦/- ನಗದು ಬಹುಮಾನವನ್ನು ಪಡೆದುಕೊಂಡರು. ಎಂ.ಫಿಲ್ ಪದವಿ ಪಡೆದ ಇನ್ನಿತರ ವಿದ್ಯಾರ್ಥಿಗಳು :- ೨. ಶ್ರೀ ರವಿಕುಮಾರ್ ಪಿ.ಜಿ, ೩. ಶ್ರೀ ಶಿವಕುಮಾರ ಎ.ಎಸ್., ೪. ಅನುಸೂಯ ಎನ್.

ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಡಾ. ಸಿ.ನಾಗಭೂಷಣ ಅವರು ಕನ್ನಡದಲ್ಲಿ ಸಂಶೋಧನಾ ಶಿಸ್ತಿನ ಇತಿಹಾಸವು ಪಾಶ್ಚಾತ್ಯ ವಿದ್ವಾಂಸರ ಕೊಡುಗೆ ಮತ್ತು ಅವರದೇ ಅಡಿಪಾಯವೆಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಕನ್ನಡದ ದೇಶಿ ವಿದ್ವಾಂಸರು ಮತ್ತು ಸಂಶೋಧಕರು ಸಂಶೋಧನೆಯನ್ನು ನಿಷ್ಠೆಯಿಂದ ವ್ರತವೆಂದು ಸ್ವೀಕರಿಸಿ ಜೀವನ ವಿಧಾನವಾಗಿರಿಸಿಕೊಂಡು ಮಹತ್ವದ ನೆಲೆಗಳನ್ನು ಕಂಡುಕೊಂಡರು.ಕನ್ನಡ ಸಂಶೋಧನೆಯು ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಕನ್ನಡ ನಾಡನ್ನು ಪ್ರವೇಶಿಸಿದರು. ಒಂದು ಶೈಕ್ಷಣಿಕ ಶಿಸ್ತು. ಕನ್ನಡ ಸಂಶೋಧನಾ ಕ್ಷೇತ್ರದಲ್ಲಿ ವಿದ್ಯಾರ್ಥಿಗಳಿಗೆ ವಿಪುಲವಾದ ಅವಕಾಶಗಳಿದ್ದು, ಸಂಶೋಧನೆಯ ಹೊಸ ಆಯಾಮಗಳು ಮತ್ತು ಸಾಧ್ಯತೆಗಳ ಬಗ್ಗೆ ದೀರ್ಘವಾದ ಮಾಹಿತಿ ನೀಡಿದರು.

"ಸಂಶೋಧನ ದಿನದ" ಪ್ರಾಸ್ತಾವಿಕ ನುಡಿಗಳನ್ನು ಡಾ॥ ಪಿ.ವಿ.ನಾರಾಯಣ ಅವರು ಆಡಿದರು.ಸಂಯೋಜನಾಧಿಕಾರಿ ಡಾ.ವಿಜಯಾಸುಬ್ಬರಾಜ್ ಅವರು ೨೦೧೬-೧೭ರ ಶೈಕ್ಷಣಿಕ ವರದಿಯನ್ನು ನೀಡಿದರು. ವಿದ್ಯಾರ್ಥಿಗಳ ಪರವಾಗಿ ಶ್ರೀ ರವಿಕುಮಾರ್ ಪಿ.ಜಿ ಅವರು ತಮ್ಮ ಅನಿಸಿಕೆಯನ್ನು ಹಂಚಿಕೊಂಡರು.ಕಾರ್ಯಕ್ರಮವು ಶ್ರೀಗುರುಪ್ರಸಾದ್ ಅವರ ವಂದನಾರ್ಪಣೆಯೊಂದಿಗೆ ಮುಕ್ತಾಯಗೊಂಡಿತು.

## ೧೮-೪-೨೦೧೮ ಸಿ.ಕೆ. ನಾಗರಾಜರಾವ್, ಕೆ.ಪಿ.ರಾವ್ ಮತ್ತು ಕೊರಟಿ ಶ್ರೀನಿವಾಸರಾವ್-ದತ್ತಿ ಉಪನ್ಯಾಸ ಕಾರ್ಯಕ್ರಮ

**ಈ ಕಾರ್ಯಕ್ರಮದಡಿಯಲ್ಲಿ ಡಾ.ಪದ್ಮರಾಜ ದಂಡಾವತಿ ಅವರು ವಿದ್ವತ್ ಪೂರ್ಣ ಉಪನ್ಯಾಸವನ್ನು ನೀಡಿದರು.**

ಉಪನ್ಯಾಸಕರು : ಡಾ. ಪದ್ಮರಾಜ ದಂಡಾವತಿ

ವಿಷಯ : ಮಾಧ್ಯಮ-ವರ್ತಮಾನದ ಬಿಕ್ಕಟ್ಟುಗಳು

ಮಾಧ್ಯಮವನ್ನು ಪ್ರಜಾಪ್ರಭುತ್ವದ ಒಂದು ಪ್ರಮುಖ ಅಂಗವಾಗಿಯೇ ಪ್ರಪಂಚದಾದ್ಯಂತ ಪರಿಗಣಿಸುತ್ತಿದೆ. ಸಮೂಹ ಮಾಧ್ಯಮವು ದಿನಪತ್ರಿಕೆಗಳು, ರೇಡಿಯೋ ಮತ್ತು ದೂರದರ್ಶನಗಳನ್ನೂ ಒಳಗೊಂಡಿರುತ್ತದೆ,




ಹೀಗೆಂದು ತಮ್ಮ ಉಪನ್ಯಾಸ ಆರಂಭಮಾಡಿ, ಪತ್ರಿಕೆಗಳ ಪ್ರಾರಂಭವನ್ನು (ಕ್ರಿ.ಶ. ೧೮೪೩), ಸ್ವರೂಪವನ್ನು, ವಿಕಾಸವನ್ನು ಮತ್ತು ಅಗಾಧವಾಗಿ ಬೆಳೆದುಬಂದು ಈಗಿನ ಮಟ್ಟಕ್ಕೆ ತಲುಪಿರುವ ಇತಿಹಾಸವನ್ನು ಚಿತ್ರೀಕರಿಸಿದರು.ಆಧುನಿಕ ಸಂವಹನಾ ಮಾಧ್ಯಮಗಳ ಉಪಯುಕ್ತತೆ ಮತ್ತು ತಂತ್ರಜ್ಞಾನದ ಉಪಯುಕ್ತತೆಯನ್ನು ವಿವರಿಸಿದರು.ಕಳೆದ ದಶಕದಿಂದ ಪತ್ರಿಕೋದ್ಯಮ ನಾನಾ ಕಾರಣಗಳಿಂದ ಅನಿವಾರ್ಯತೆಗೆ ಸಿಲುಕಿ ವ್ಯಾಪಾರೀಕರಣಗೊಳ್ಳುತ್ತಿರುವ ಬಗ್ಗೆ ಉದಾಹರಣೆ ನೀಡಿ ವಿಷಾದ ವ್ಯಕ್ತಪಡಿಸಿದರು.ಪ್ರತಿಕೋದ್ಯಮವು ಜಾಹೀರಾತಿನ ಬಲೆಯಲ್ಲಿ ಸಿಕ್ಕಿ ನಲುಗಿದೆ ಮತ್ತು ಮುಂದೂ ಸಹ ಇದೇ ಪರಿಸ್ಥಿತಿಯಲ್ಲಿ ಕಾರ್ಯನಿರ್ವಹಿಸಬೇಕಾಗುವ ಸಾಧ್ಯತೆಗಳೇ ಕಾಣುತ್ತಿದ್ದು, ಇಂತಹ ಒತ್ತಡ ಮತ್ತು ತಲ್ಲಣಗಳ ಪರಿಸರಕ್ಕೆ ಪತ್ರಿಕೋದ್ಯಮಿಗಳು ವಿಧಿಯಿಲ್ಲದೇ ಒಗ್ಗಿಕೊಂಡು ಕೆಲಸ ಮಾಡುತ್ತಿರುವ ಸಂದರ್ಭಗಳನ್ನು ಚಿತ್ರಿಸಿದರು.ಪತ್ರಿಕೆಗಳು ತಮ್ಮ ನೆಲಗಟ್ಟನ್ನು ಕಳೆದುಕೊಳ್ಳುವ ಭೀತಿ ಎದುರಾಗುವ ಸಾಧ್ಯತೆಗಳನ್ನು ವಿವರಿಸಿದರು.

ಉಪನ್ಯಾಸಕರು ಸಭಿಕರು ಕೇಳಿದ ಕೆಲವು ಪ್ರಶ್ನೆಗಳಿಗೆ ಉತ್ತರಿಸಿದರೂ, ಸಂವಾದಕ್ಕೆ ಸಮಯದ ಅಭಾವ ಉಂಟಾಗಿ ಮುಂದುವರೆಸಲು ಸಾಧ್ಯವಾಗಲಿಲ್ಲ. ಉಪನ್ಯಾಸದ ಆರಂಭಕ್ಕೆ ಮುನ್ನ, ಡಾ. ಪಿ.ವಿ.ನಾರಾಯಣ ಅವರು ಉಪನ್ಯಾಸಕರ ಪರಿಚಯವನ್ನು ಸಭೆಗೆ ಮಾಡಿದರು.ದತ್ತಿದಾನಿಗಳ ಕುಟುಂಬ ವರ್ಗದವರ ಪರಿಚಯ ಮಾಡಿ, ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಶ್ರೀ ರವೀಂದ್ರನಾಥ್, ಕಾರ್ಯದರ್ಶಿಗಳ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ಬಿ.ಎಂ.ಶ್ರೀ ಪ್ರತಿಷ್ಠಾನದ ನೂತನ ಪ್ರಯೋಗ ಸಾಹಿತ್ಯಾಸಕ್ತರಿಗೆ ಉಚಿತ ಪುಸ್ತಕ ವಿತರಣೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಳೆದ 37ವರ್ಷಗಳಿಂದ ಅವಿರತವಾಗಿ ಸೇವೆ ಸಲ್ಲಿಸುತ್ತಿದೆ. ಪ್ರತಿಷ್ಠಾನವು ಪ್ರತಿ ತಿಂಗಳು ಆರಕ್ಕೆ ಕಡಿಮೆಯಿಲ್ಲದಂತೆ ಸಾಹಿತ್ಯಕ ಕಾರ್ಯಕ್ರಮಗಳನ್ನು ನಡೆಸುತ್ತಿರುವುದು ಸಾಹಿತ್ಯಾಸಕ್ತರು ಹಾಗೂ ಸಾರ್ವಜನಿಕರು ಈ ಕಾರ್ಯಕ್ರಮಗಳಲ್ಲಿ ಉತ್ತಮ ಸಂಖ್ಯೆಯಲ್ಲಿ ಭಾಗವಹಿಸುತ್ತಿರುತ್ತಾರೆ. ಸಾಹಿತ್ಯಾಸಕ್ತರು ಹಾಗೂ ಸಾರ್ವಜನಿಕರು ಕನ್ನಡ ಸಾಹಿತ್ಯದಲ್ಲಿ ಹೆಚ್ಚಿನ ಅಭಿರುಚಿಯನ್ನು ಬೆಳೆಸಿಕೊಳ್ಳುವುದನ್ನು ಪ್ರೋತ್ಸಾಹಿಸಲು 7ನೇ ಜೂನ್ 2017ರಿಂದ ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಎಲ್ಲ ಸಾಹಿತ್ಯಾಸಕ್ತರಿಗೆ ಕೊಡುಗೆಯಾಗಿ ಪ್ರತಿಷ್ಠಾನವು ತನ್ನ ಪ್ರಕಟಣೆಗಳ ಪ್ರತಿಗಳನ್ನು ಉಚಿತವಾಗಿ ನೀಡುವ ಪರಿಪಾಠವನ್ನು ಬೆಳೆಸಿಕೊಂಡು ಬರುತ್ತಿದೆ. ಇದುವರೆಗೂ 40 ಕಾರ್ಯಕ್ರಮಗಳಲ್ಲಿ 1,251 ಪುಸ್ತಕಗಳ ಪ್ರತಿಗಳನ್ನು ಸಾಹಿತ್ಯಾಸಕ್ತರಿಗೆ ನೀಡಲಾಗಿದೆ.ಈ ಕೊಡುಗೆಯ ಸದುಪಯೋಗವನ್ನು ಪಡೆದುಕೊಳ್ಳಬೇಕೆಂದು ಪ್ರತಿಷ್ಠಾನದ ಅಭಿಮಾನಿಗಳನ್ನು ವಿನಂತಿಸುತ್ತೇವೆ.

## ಪ್ರಕಟಣೆ

ಬಿಎಂಶ್ರೀ ಪ್ರತಿಷ್ಠಾನವು ೩೭ ವರ್ಷಗಳಿಂದ ಸಾವಿರಾರು ಕಾರ್ಯಕ್ರಮಗಳು ಹಾಗೂ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವಿರತವಾಗಿ ಸಕ್ರಿಯವಾಗಿರುತ್ತದೆ.ಬಿಎಂಶ್ರೀ ಪ್ರತಿಷ್ಠಾನವು ನಡೆದು ಬಂದ ದಾರಿಯನ್ನು ದಾಖಲಿಸಿ ಸಾಧನೆಗಳನ್ನು ಗುರುತಿಸಿ ಇದನ್ನು ಸಾಧ್ಯಗೊಳಿಸಿದ ಹಲವಾರು ಮಹನೀಯರ ಕೊಡುಗೆಗಳನ್ನು ಸ್ಮರಿಸಿಕೊಳ್ಳುವ ಕಾರ್ಯವನ್ನು ಕೈಗೊಳ್ಳಲು ಪ್ರತಿಷ್ಠಾನವು ಚಿಂತನೆ ನಡೆಸುತ್ತಿದೆ.ಇಂತಹ ಬೃಹತ್ ಕಾರ್ಯವನ್ನು ಸಾಧಿಸಲು ಪ್ರತಿಷ್ಠಾನದ ಜೊತೆ ಕೈಗೂಡಿಸಿ ಕೆಲಸ ಮಾಡುವಂತಹ ಸ್ವಯಂಪ್ರೇರಿತರು ಬೇಕಾಗಿರುತ್ತಾರೆ. ಈ ಮಹತ್ವದ ಕಾರ್ಯದಲ್ಲಿ ಭಾಗವಹಿಸುವಂತೆ ಎಲ್ಲ ಸದಸ್ಯರನ್ನೂ ನಮಗೆ ಬೆಂಬಲ ನೀಡಬೇಕೆಂದು ಕೋರುತ್ತವೆ. ಆಸಕ್ತರು ದಯವಿಟ್ಟು ಸಂಪರ್ಕಿಸಿ: ಗೌರವ ಕಾರ್ಯದರ್ಶಿ, ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು




**ನಮ್ಮಭಿಮಾನ:** ಈಚೆಗೆ ಶಿವಮೊಗ್ಗದಲ್ಲಿ ಒಂದು ಸಮಾವೇಶ ನಡೆಯಿತು, ಅದನ್ನು ಸಂಘಟಕರು 'ನಮ್ಮಭಿಮಾನ' ಎಂದು ಕರೆದುಕೊಂಡರು. ಅದು ಯಾತಕ್ಕಾಯಿತು, ಯಾರಿಗಾಗಿ ಆಯಿತು ಎಂಬುದು ನಮಗೆ ಪ್ರಸ್ತುತವಲ್ಲ. ಬೇಕಾಗಿರುವುದು ಆ ಶಬ್ದದ ಸ್ವರೂಪ ಚರ್ಚೆ, ಅದರ ಅರ್ಥ ಏನಿರಬಹುದು ಎಂಬುದು.ಈ ಶಬ್ದವು 'ನಮ್ಮ' ಹಾಗೂ 'ಅಭಿಮಾನ' ಎಂಬ ಎರಡು ಪದಗಳಿಂದ ಕೂಡಿದೆ.ನಮ್ಮ ಎಂಬುದು ನಮಗೆ ಸೇರಿದ ಅಥವಾ ನಾವು ಹೊಂದಿರುವ ಎಂಬ ಅರ್ಥವನ್ನು ಹೊಂದಿರುವುದರಿಂದ ಈ ಶಬ್ದಕ್ಕೆ ಒಟ್ಟಾಗಿ 'ನಾವು (ಇಂಥವರ ಬಗ್ಗೆ) ಹೊಂದಿರುವ ಅಭಿಮಾನ' ಎಂಬ ಅರ್ಥ ಹೊರಡಬಹುದು. ಹೊರನೋಟಕ್ಕೆ ಅಭಿಮಾನ ಎಂಬ ಪದ-ಕ್ಕೆ ಪ್ರೀತಿ ಎಂಬ ಅರ್ಥವಿರುವುದು ಸ್ಪಷ್ಟ. ಯಾರಿಗಾಗಿ ಸಮಾವೇಶವನ್ನು ಮಾಡುತ್ತಿರುವರೋ ಅವರ ಬಗ್ಗೆ ಸಂಘಟಕರು ಹೊಂದಿರುವ ಅಭಿಮಾನ ಇದು ಎಂಬುದು ಅಭಿಪ್ರಾಯ.

ನಮ್ಮ ಎಂಬುದು ನಾವು ಎಂಬುದರ ಷಷ್ಠೀ ವಿಭಕ್ತಿಯ ರೂಪ, ಕನ್ನಡದ್ದೇ ಪದ; ಅಭಿಮಾನ ಸಂಸ್ಕೃತ ಮೂಲದ್ದು.ಸಂಪ್ರದಾಯನಿಷ್ಠ ವೈಯಾಕರಣಿಗಳ ದೃಷ್ಟಿಯಲ್ಲಿ ಇದೊಂದು ಅರಿಸಮಾಸ. ಅಭಿಮಾನ ಎಂಬುದಕ್ಕೆ ಸಂಸ್ಕೃತದಲ್ಲಿ ಅಹಂಕಾರ, ಆತ್ಮಗೌರವ ಎಂಬ ಅರ್ಥಗಳಿವೆ. ನಮ್ಮ ಪ್ರಾಚೀನ ಕಾವ್ಯಗಳಲ್ಲಿಯೂ ಸುಮಾರು ಇದೇ ಅರ್ಥವಿದೆ, ಆದರೆ ಅರ್ಥಚ್ಛಾಯೆ ಕೊಂಚ ಭಿನ್ನ. 'ಪಂಪಭಾರತ'ದಲ್ಲಿ "ಅಭಿಮಾನಮೊಂದೆ ಕುಲಂ" ಎಂಬ ಮಾತಿದೆ.ವ್ಯಕ್ತಿಯು ಹೊಂದಿರಬೇಕಾದ ಅಪೇಕ್ಷಣೀಯ ಗುಣವಾದ ಆತ್ಮಗೌರವ ಎಂಬ ಅರ್ಥವಿದೆ ಅಲ್ಲಿ. "ಅಭಿಮಾನಧನ" – ಯಾರಿಗೆ ಅಭಿಮಾನವೇ ಹಣವೋ ಅಂಥವನು – ಎಂಬ ಮಾತು 'ಕವಿರಾಜಮಾರ್ಗ'ದಲ್ಲಿಯೇ ಪ್ರಯೋಗಗೊಂಡಿದೆ. ಹಾಗಾಗಿಯೇ ರನ್ನಕವಿಯು ದುರ್ಯೋಧನನನ್ನು "ಅಭಿಮಾನಧನ" ಎನ್ನುತ್ತಾನೆ. ತನ್ನ ಬಗೆಗಿನ ಗೌರವ ಎಂಬುದು ಸಡಿಲಗೊಂಡು ವ್ಯಕ್ತಿ ಮತ್ತೊಬ್ಬ ವ್ಯಕ್ತಿಯ ಬಗ್ಗೆ ಇಟ್ಟ ಗೌರವವೂ ಅಭಿಮಾನ ಎನಿಸಿಕೊಂಡು, ಅದೇ ಮುಂದೆ ಪ್ರೀತಿ ಎಂಬ ಅರ್ಥವನ್ನು ಪಡದಿದೆ. ತನ್ನ ಬಗೆಗಿನ ಗೌರವವನ್ನು ಸೂಚಿಸಲು 'ಸ್ವಾಭಿಮಾನ' ಹಾಗೂ 'ಆತ್ಮಾಭಿಮಾನ' ಎಂಬ ಶಬ್ದಗಳು ಈಗ ಹೆಚ್ಚು ರೂಢಿಯಲ್ಲಿವೆ. ಶಬ್ದಗಳಿಗೆ ಕಾಲಕಾಲಕ್ಕೆ ಬದಲಾಗುವ ಅರ್ಥಚ್ಛಾಯೆಗೆ ಇದೊಂದು ಒಳ್ಳೆಯ ಉದಾಹರಣೆ.

*****

**ನಿಲ್ಲು:** ಇದೊಂದು ಕ್ರಿಯಾಪದ; ಹಳಗನ್ನಡದಲ್ಲಿದು 'ನಿಲ್' ಎಂಬ ರೂಪದಲ್ಲಿತ್ತು.ತಮಿಳು, ಮಲಯಾಳಂಗಳಲ್ಲಿ ನಿಲ್ ಎಂಬ ರೂಪದಲ್ಲಿಯೂ, ತೆಲುಗಿನಲ್ಲಿ ನಿಲುಚು ಎಂಬುದಾಗಿಯೂ, ತುಳುನಲ್ಲಿ ನಿಲ್, ನಿಲಿ ಎಂಬ ರೂಪಗಳಲ್ಲಿಯೂ ದೊರೆಯುತ್ತದೆ. ನಿಲ್ ಎಂಬುದಕ್ಕೆ ಕೇಶಿರಾಜನ 'ಶಬ್ದಮಣಿದರ್ಪಣ'ವು ಎರಡು ಅರ್ಥಗಳನ್ನು ನೀಡುತ್ತದೆ: "ನಿಲ್ □ ಗತಿಮುಕ್ತೌ ಸ್ಥಾಪನೇಚ". ತಂಗುವುದು ಎಂಬರ್ಥವೂ ಇದಕ್ಕಿದೆ ("ತಡೆದಿಲ್ಲಿ ನಿಂದೆನಪ್ಪೊಡೆ ಮಡಿವಾದಪುದು" – ನಯಸೇನನ 'ಧರ್ಮಮೃತ'). ಸ್ಥಿರವಾಗಿರು ಎಂಬರ್ಥದಲ್ಲಿಯೂ ಇದು ಬಳಕೆಯಲ್ಲಿದೆ ("ಶ್ರೀರೂಪಲೀಲಾಧನವಿಭವಮಹಾರಾಶಿಗಳ್ ನಿಲ್ಲವಾರ್ಗಂ" – ಎಂಟನೆಯ ಶತಮಾನದ ಒಂದು ಶಾಸನ).ನಿಲ್ ಎಂಬುದಕ್ಕೆ ಎ ಎಂಬ ಪ್ರತ್ಯಯ ಸೇರಿಸಿ ಅವಧಾರಣೆಯಾಗಿ 'ನಿಲೆ ನಿಲ್' 'ನಿಲೆ ನುಡಿ' ಎಂಬ ರೂಪಗಳಲ್ಲಿಯೂ ಈ ಶಬ್ದವು ಬಳಕೆಗೊಂಡಿದೆ. ಕಾಯುವುದು ಎಂಬರ್ಥವೂ ಇದಕ್ಕಿದೆ: "ಬೇಡಲ್ಕೆ ಬಂದು ನಿಂದಿರ್ಪಂ" ಎಂಬ ಪ್ರಯೋಗ 'ಕರ್ಣಾಟಕ ಕಾದಂಬರಿ'ಯದು. ನೆಲೆ ಎಂಬರ್ಥವೂ ಈ ಶಬ್ದಕ್ಕಿದೆ ("ಆನತನಲ್ಲದಂಗೆ ಪದುಳಂ ನಿಲವಿಲ್ಲ" – ನಾಗಚಂದ್ರನ 'ಪಂಪರಾಮಾಯಣ").

ನಿಂತ ವ್ಯಕ್ತಿಯ ಸ್ವರೂಪವೇ ನಿಲವು ಅಥವಾ ನಿಲುವು."ನಿಲವು ಮೋಹನಂ" ಎಂಬುದು 'ಹರಿಚಂದ್ರಕಾವ್ಯ'ದ ಪ್ರಯೋಗ.ಇದು ರೂಪಕವಾಗಿ ವ್ಯಕ್ತಿಯ ಧೋರಣೆ ಅಥವಾ ಸ್ವಭಾವ ಎಂಬರ್ಥಕ್ಕೆ ವಿಸ್ತಾರಗೊಳ್ಳುತ್ತದೆ. "ಮಹಾದೇವಿಯಕ್ಕಗಳ ನಿಲವ ಬಸವಣ್ಣನ ಕೃಪೆಯಿಂದಲರಿದೆನಯ್ಯಾ" ಎಂಬುದು ಮಡಿವಾಳ ಮಾಚಿದೇವನ ಮಾತು.ನಿಂತು ಎಟುಕಿಸಿಕೊಳ್ಳುವುದು 'ನಿಲ್ಕಿಸು' ಅಥವಾ 'ನಿಲುಕಿಸು'. ಹಾಗೆ ನಿಂತು ಎಟುಕಿಸಿಕೊಳ್ಳಬಹುದಾದ, ಹಾಲು ಮೊಸರುಗಳ ಗಡಿಗೆಗಳನ್ನಿಡುವ ಹಗ್ಗದ ಜೋತಾಡುವ ಸಾಧನವೇ 'ನಿಲವು' ಅಥವಾ 'ನೆಲವು'.

ವಾಹನಗಳು ಹೊರಡುವ ಹಾಗೂ ಬಂದು ನಿಲ್ಲುವ ಜಾಗಗಳನ್ನು ನಿಲ್ದಾಣ ಎಂದೂ, ಮಧ್ಯೆ ಜನರನ್ನು ಹತ್ತಿಸಿಕೊಳ್ಳುವ ಜಾಗವನ್ನು ನಿಲುಗಡೆ ಎಂದೂ ಕರೆಯುತ್ತೇವೆ. ವಾಹನಗಳನ್ನು ನಿಲ್ಲಿಸುವ ಜಾಗವೂ (ಪಾರ್ಕಿಂಗ್) ನಿಲುಗಡೆಯೇ.ಬಹು ತುರ್ತಾಗಿ ಚರ್ಚಿಸಬೇಕಾದ ವಿಷಯ ಬಂದಾಗ ಸಾಗುತ್ತಿರುವ ವಿಷಯದ ಚರ್ಚೆಯನ್ನು ನಿಲ್ಲಿಸಲು ಮಾಡುವ ಕೋರಿಕೆಯೇ ಶಾಸನಸಭೆಗಳಲ್ಲಿನ 'ನಿಲುವಳಿ ಸೂಚನೆ'.

---

ಅವಲೋಕನ – ಪುಸ್ತಕದ ಕಿರು ವಿಮರ್ಶೆ

## ಎಂ.ಕೆ. ಇಂದಿರಾ ಅವರ 'ಸದಾನಂದ' – ಒಂದು ಅವಲೋಕನ

**– ಡಾ. ವಿಜಯಾ ಸುಬ್ಬರಾಜ್**

ಕನ್ನಡದ ಮಹಿಳಾ ಕಾದಂಬರಿಕಾರರ ಸಾಹಿತ್ಯ ಚರಿತ್ರೆ, ಅದರಲ್ಲಿಯೂ ಆಧುನಿಕ ಕಾಲಘಟ್ಟದಲ್ಲಿ ತ್ರಿವೇಣಿ, ಅನುಪಮಾ ಎಂ.ಕೆ.ಇಂದಿರಾ ಅವರನ್ನು ಪರಿಗಣಿಸದೆ ಮುಂದುವರೆಯಲು ಸಾಧ್ಯವೇ ಇಲ್ಲ. ಈ ಮೂವರು ಲೇಖಕಿಯರೂ ಕಾದಂಬರಿ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯನ್ನು ನೀಡಿರುವರೆಂಬುದರಲ್ಲಿ ಎರಡು ಮಾತಿಲ್ಲ. ಮಹತ್ವದ ಕೊಡುಗೆ ಎನ್ನುವುದನ್ನು ಜನಪ್ರಿಯತೆಯ ನೀತಿಯಲ್ಲಿ ಎಂದು ಅರ್ಥೈಸಬೇಕಾಗುತ್ತದೆ.ಈ ಮೂರೂ ಮಂದಿ ಹಿರಿಕಿರಿಯ ಸಮಕಾಲೀನರು. ಆದರೂ ಮೊದಲಿಗೆ ತ್ರಿವೇಣಿ, ಈ ಇಬ್ಬರನ್ನೂ ಮೀರಿದ ನೆಲೆಯಲ್ಲಿ ಜನಪ್ರಿಯತೆಯನ್ನು ಗಳಿಸಿಕೊಂಡಿರುವುದು ಒಂದು ಅಂಶವಾದರೆ, ಹಿರಿಯ ಲೇಖಕಿಯರಿಬ್ಬರೂ ಕಾದಂಬರಿ ರಂಗ ಪ್ರವೇಶಿಸುವಷ್ಟರ ಹೊತ್ತಿಗೆ ತ್ರಿವೇಣಿ ಇಪ್ಪತ್ತಕ್ಕೂ ಹೆಚ್ಚು ಕತೆ, ಕಾದಂಬರಿಗಳನ್ನು ಬರೆದು, ಅತ್ಯಲ್ಪ ಆಯುವಿನಲ್ಲಿಯೇ ಕಾದಂಬರಿ ಜಗತ್ತಿನಲ್ಲಿ ಶೂನ್ಯ ಅಥವಾ ನಿರ್ವಾತ ಸ್ಥಿತಿ ನಿರ್ಮಿಸಿ, ಇಹಲೋಕ ತ್ಯಜಿಸಿದ್ದರು. ಅದರಲ್ಲಿಯೂ ಎಂ.ಕೆ. ಇಂದಿರಾ, ತಮ್ಮ ಮೊದಲ ಕೃತಿ' 'ತುಂಗಭದ್ರಾ'(೧೯೬೩) ಹೊರತಂದ ವರ್ಷವೇ ತ್ರಿವೇಣಿ ತೀರಿಕೊಂಡದ್ದು, ಮತ್ತು ಅವಳದೇ ಹೆಸರಿನಲ್ಲಿ ತುಂಗಭದ್ರಕ್ಕೆ ಪ್ರಶಸ್ತಿ ದೊರೆತದ್ದು (ಕಾಕ ತಾಳೀಯವೆಂಬಂತೆ!) ಒಂದು ದುರುಂತವ್ಯಂಗ್ಯವಾಗಿ ಕಾಣಿಸುತ್ತದೆ.ಮಂಡ್ಯದಲ್ಲಿ ಆಕಸ್ಮಿಕವಾಗಿ ಈ ಇಬ್ಬರು ಲೇಖಕಿಯರೂ ಪರಸ್ಪರ ಪರಿಚಯವಾದದ್ದೇ ಅಲ್ಲದೇ, ಇಂದಿರಾ ಅವರನ್ನು ಕಾದಂಬರಿಗಳನ್ನು ಬರೆಯುವಂತೆ ಪ್ರೋತ್ಸಾಹಿಸಿದ್ದೂ ಕೂಡಾ ಒಂದು ಮಹತ್ವದ ಅಂಶವೇ ಆಗಿದೆ.

ಕೇವಲ ಮಿಡ್ಲ್‌ಸ್ಕೂಲ್ ಅಷ್ಟೇ ಓದಿದ್ದರೂ, ಅವರು ಹುಟ್ಟಿ ಬೆಳೆದ ಸುಸಂಸ್ಕೃತ ಪರಿಸರ, ಸಾಹಿತ್ಯದ ವಾತಾವರಣಗಳು ಬಯಸದೆಯೂ ಬರಹಗಾರ್ತಿಯಾಗುವಂತಹ ಅಂತಃ ಪ್ರೇರಣೆಯನ್ನು ಇಂದಿರಾ ಅವರು ಪಡೆದಿರಬೇಕು.ಮಲೆನಾಡಿನ ದಟ್ಟ ಪ್ರಾಕೃತಿಕ ಪರಿಸರ, ಸೌಂದರ್ಯಗಳು ಅವರೊಳಗಿನ ಸೃಜನಶೀಲತೆಯನ್ನು ಬಡಿದೆಬ್ಬಿಸಿರಬೇಕು. ಇದರ ಜೊತೆಗೆ ಆಳವಾದ ಜೀವನಾನುಭವ, ಮನುಷ್ಯ ಸಂಬಂಧಗಳು, ಸಾಮಾಜಿಕ , ಸಾಂಪ್ರದಾಯಿಕ ಮೌಲ್ಯಗಳ ಗಂಭೀರ ಚಿಂತನೆಗಳು– ಎಲ್ಲವೂ ಒಟ್ಟಿಗೆ ಮೇಳೈಸಿ, ಮೊಟ್ಟಮೊದಲ 'ಕಾದಂಬರಿ' **೭ನೇ ಪುಟಕ್ಕೆ**



# ಎಂವಿಸೀ

(ಎಂ.ವಿ. ಸೀತಾರಾಮಯ್ಯ)

## ಬದುಕು – ಒಂದು ನೋಟ

– ಡಾ. ಪಿ.ವಿ. ನಾರಾಯಣ್

೧೭೯೯ ರಲ್ಲಿ ಯುದ್ಧದಲ್ಲಿ ಟಿಪ್ಪು ಸುಲ್ತಾನನ ಮರಣಾನಂತರ ಮತ್ತೆ ಒಡೆಯರ್ ವಂಶದ ಆಳ್ವಿಕೆಗೆ ಮೈಸೂರು ಸಂಸ್ಥಾನ ಬಂತು.೧೯೩೩ ರ ಹೊತ್ತಿಗೆ ಅರಸರೇ ಮೈಸೂರಿನ ರಾಜರಾಗಿದ್ದರೂ ಆಳ್ವಿಕೆ ಮಾತ್ರ ಬ್ರಿಟಿಷರು ವಹಿಸಿಕೊಂಡರು.ಅಂ–ದರೆ ಒಂದು ರೀತಿಯಲ್ಲಿ ಇಂಗ್ಲಿಷ್‌ನ ಮತ್ತು ಇಂಗ್ಲಿಷ್‌ರ ನೇರ ಪ್ರಭಾವ ಈ ಸಂಸ್ಥಾನದ ಮೇಲೆ ಬೀಳಲಾರಂಭಿಸಿತು.ಇಂಗ್ಲಿಷ್ ಶಿಕ್ಷಣ ಪದ್ಧತಿಯ ಅಳವಡಿಕೆಯಿಂದಾಗಿ ವಿದ್ಯೆಯೆಂಬುದು ಎಲ್ಲರಿಗೂ ಎಟುಕುವ ಮುಕ್ತ ಸ್ಥಿತಿಯುಂಟಾಯಿತು. ಇಂಗ್ಲಿಷನ್ನು ಕಲಿತ ನಮ್ಮ ಜನ ಬದುಕನ್ನು ಹೊಸರೀತಿಯಿಂದ ನೋಡಲಾರಂಭಿಸಿದುದನ್ನು ಅಲ್ಲಗಳೆಯಲಾಗದು. ಇಂಗ್ಲಿಷ್‌ನ ಸಾಹಿತ್ಯಾಭ್ಯಾಸ ನಮ್ಮ ಸಾಹಿತಿಗಳ ಮೇಲೆ ವಿಶೇಷ ಅಚ್ಚನ್ನೊತ್ತಿತು. ಅಲ್ಲಿನ ಜೀವನದೃಷ್ಟಿ, ಐಹಿಕತೆಯ ಬಗೆಗಿನ ಒಲವು, ಸಾಹಿತ್ಯದಲ್ಲಿನ ವೈವಿಧ್ಯ ಕನ್ನಡ ಬರವಣಿಗೆಯ ಮೇಲೆ ಬಿದ್ದು, ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಅನುವಾದಗಳ ಮೂಲಕ ಹೊರಗಿನ ಗಾಳಿಯು ನಮ್ಮ ಮನೆಯೊಳಗೆ ಸುಳಿದಾಡಲು ಅವಕಾಶ ಕಲ್ಪಿಸಿಕೊಂಡ ಕಾಲ.ಜೊತೆಗೆ, ಹೊರಗಿನಿಂದ ಬೀಸಿ ಬಂದ ಗಾಳಿ ದೇಸಿ ಬರಹಗಾರರ ಮೈಯಲ್ಲೂ ಪುಲಕವುಂಟುಮಾಡಿ ತಮ್ಮ ರಚನೆಯಲ್ಲಿ ಅರಿವಿಲ್ಲದಂತೆಯೇ ಹೊಸತನಕ್ಕೆ ಎಡೆಕೊಡುವಂತಾಯಿತು. ಅಂದರೆ ಹೊಸಗನ್ನಡ ಸಾಹಿತ್ಯ ಬರಲು ನಮ್ಮ ನೆಲವನ್ನು ಹರಗು ಮಾಡಿಕೊಂಡ ಕಾಲವಿದು.

ಇಪ್ಪತ್ತನೆಯ ಶತಮಾನದ ಮೊದಲಲ್ಲಿಯೇ ಇದರ ಫಲ ಕಾಣಲು ಮೊದಲಾಯಿತು.ವಿಶ್ವವಿದ್ಯಾನಿಲಯದ ಶಿಕ್ಷಣವಂತೂ ಇಂಗ್ಲಿಷ್ ಮತ್ತು ಆ ಮೂಲಕ ಪಾಶ್ಚಾತ್ಯ ಸಾಹಿತ್ಯ–ಸಂಸ್ಕೃತಿಗಳ ಪರಿಚಯವನ್ನೊದಗಿಸಿ ದೇಸಿ–ಪರದೇಸಿಗಳ ಮಧುರ ಹೆಣೆತಕ್ಕೆ ಕಾರಣವಾಯಿತು.ಮೈಸೂರು ವಿಶ್ವವಿದ್ಯಾನಿಲಯದ ಆರಂಭ, ಅದರಲ್ಲೂ ಆ ಮುಂದೆ ಒಂದು ದಶಕದ ಬಳಿಕ ಕನ್ನಡ ಎಂ.ಎ.ತರಗತಿಯನ್ನು ಆರಂಭಿಸಿದ್ದು ಹೊಸಗನ್ನಡ ಸಾಹಿತ್ಯಕ್ಕೆ ಬೀಜ ಬಿತ್ತಿದಂತಾಯಿತು. ಮೈಸೂರು ಸಂಸ್ಥಾನದ ಹೊರಗಿದ್ದ ಕನ್ನಡ ಭಾಗಗಳಲ್ಲಿಯೂ ಇಂಗ್ಲಿಷ್ ಸಾಹಿತ್ಯ–ಸಂಸ್ಕೃತಿಗಳು ಅಲ್ಲಿನ ಕನ್ನಡ ಬರಹಗಾರರ ಮೇಲೆ ಪ್ರಭಾವ ಬೀರಿದರೂ, ಬಿ.ಎಂ.ಶ್ರೀಕಂಠಯ್ಯನವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ನವೋದಯದ ಬರಹಗಾರರಿಗೆ ತರಗತಿಗಳಲ್ಲಿಯೇ ನೆಲಗಟ್ಟನ್ನು ಸಿದ್ಧಪಡಿಸಿಕೊಟ್ಟರು, ಜೊತೆಗೆ ಕನ್ನಡದೀಕ್ಷೆಯನ್ನೂ ನೀಡಿದರು. ಜೊತೆಯಲ್ಲಿ ತಾವೇ 'ಇಂಗ್ಲಿಷ್ ಗೀತೆ'ಗಳನ್ನು ಪ್ರಕಟಿಸಿ ಹೊಸಗನ್ನಡ ಕಾವ್ಯ ಹರಿಯಬೇಕಾದ ಪಾತ್ರವನ್ನು ಸಿದ್ಧಪಡಿಸಿಕೊಟ್ಟರು. ಹೀಗಾಗಿ ಹೊಸಗನ್ನಡ ಕಾವ್ಯ ಎರಡೂ ಸಂಸ್ಕೃತಿಗಳ ರಸಪಾಕವಾಗಿ ಹುಲುಸಾದ ಬೆಳೆಯನ್ನು ಕೊಡಹತ್ತಿತು.

ಮೊದಲ ಪೀಳಿಗೆಯ ಹೊಸಗನ್ನಡ ಬರಹಗಾರರು – ಅವರು ಹಳೆಯ ಮೈಸೂರು ಪ್ರಾಂತವೋ, ಧಾರವಾಡ ಸೀಮೆಯೋ, ಕರಾವಳಿಯೋ – ಯಾವುದೇ ಭಾಗಕ್ಕೆ ಸೇರಿದ್ದರೂ, ಹುರುಪಿನಿಂದ ಆದಷ್ಟೂ ಹೊಸ ಬೆಳೆಯನ್ನು ಕನ್ನಡದಲ್ಲಿ ಬೆಳೆಯಲು ಪ್ರಯತ್ನಶೀಲರಾದರು.ಈ ತಲೆಮಾರಿನ ಲೇಖಕರು ಆ ಕಾರಣಕ್ಕೇ ಕಾವ್ಯ, ನಾಟಕ, ಕತೆ–ಕಾದಂಬರಿ, ಪ್ರಬಂಧ ಮುಂತಾದ ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿಯೂ ಬರೆಯತೊಡಗಿದರು; ಜೊತೆಗೆ ಹಳೆಯ ಕಾವ್ಯಗಳನ್ನು ಹೊಸತನದಿಂದ ಪರಿಶೀಲಿಸುವ ರೀತಿ, ವಿಚಾರಸಾಹಿತ್ಯಕ್ಕೆ ಕನ್ನಡವನ್ನು ವಾಹಕವನ್ನಾಗಿಸುವ ಪ್ರಯತ್ನ – ಇವುಗಳಲ್ಲಿಯೂ ತೊಡಗಿದರು.ಇಂಥವರು ನೇರವಾಗಿಯೋ, ಪರೋಕ್ಷವಾಗಿಯೋ ಮುಂದಿನ ಪೀಳಿಗೆಯ ಮೇಲೆ ದಟ್ಟ ನೆರಳನ್ನು ಸುಳಿಸಿದರು.ಇಂಥವರಲ್ಲಿ ಕೆಲವರು ಅಧ್ಯಾಪಕರೂ ಆದುದರಿಂದ ತಾವು ಪಡೆದಿದ್ದ ಹೊಸತನದ ಕನ್ನಡದೀಕ್ಷೆಯನ್ನು ತಮ್ಮ ವಿದ್ಯಾರ್ಥಿಗಳಿಗೂ ದಾಟಿಸಿದರು. 'ನೂರು ಮರ, ನೂರು ಸ್ವರ, ಒಂದೊಂದೂ ಅತಿಮಧುರ' ಎಂಬ ರೀತಿಯಲ್ಲಿ ಕನ್ನಡ ಸಾಹಿತ್ಯವೃಕ್ಷ ಸೊಂಪಾಗಿ ಬೆಳೆಯತೊಡಗಿತು.

ಹೀಗೆ ಹೊರಹೊಮ್ಮಿದ ಕನ್ನಡ ನವೋದಯದ ಎರಡನೆಯ ಪೀಳಿಗೆಯ ಲೇಖಕರಲ್ಲಿ ಪ್ರೊ.ಎಂ.ವೀ. ಸೀತಾರಾಮಯ್ಯನವರೂ ಪ್ರಮುಖರು.ತಮ್ಮ ಪೂರ್ವ ಸೂರಿಗಳಂತೆಯೇ ಸಾಹಿತ್ಯದ ಕಾವ್ಯ, ಕತೆ–ಕಾದಂಬರಿ, ಪ್ರಬಂಧ, ನಾಟಕ, ಗ್ರಂಥಸಂಪಾದನೆ, ಮಕ್ಕಳ ಸಾಹಿತ್ಯ, ವಿಮರ್ಶೆ ಮುಂತಾದಎಲ್ಲ ಪ್ರಕಾರಗಳಲ್ಲಿ ಕೈಯಾಡಿಸಿ ತಮ್ಮ ಛಾಪನ್ನು ಒತ್ತಿದ ಲೇಖಕರೆನಿಸಿಕೊಂಡರು. ಜೊತೆಗೆ ಸುದೀರ್ಘ ಕಾಲ ಕನ್ನಡ ಸಾಹಿತ್ಯವನ್ನು ಬೋಧಿಸಿ ತಾವು ಪಡೆದುದನ್ನು ತಮ್ಮ ವಿದ್ಯಾರ್ಥಿವೃಂದದಲ್ಲಿಯೂ ಹಂಚಿದರು. ತಮ್ಮ ಗುರುಗಳಿಂದ ಪಡೆದ ದೀಕ್ಷೆಯನ್ನು ತಮ್ಮ ಶಿಷ್ಯರಿಗೂ ನೀಡಿದರು.

(ಮುಂದುವರೆಯುತ್ತದೆ)

---

**೬ನೇ ಪುಟದಿಂದ**

ತುಂಗಭದ್ರದೊಂದಿಗೆ ಕನ್ನಡ ಓದುಗರಿಗೆ ಪರಿಚಯವಾದದ್ದೇ ಅಲ್ಲದೆ, ಅಚ್ಚು– ಮೆಚ್ಚಿನ ಲೇಖಕಿಯಾಗಿ ನೆಲೆಗೊಂಡರು. ಅಲ್ಲಿಂದ ಪ್ರಾರಂಭವಾದ ಅವರ ಸಾಹಿತ್ಯ ಯಾತ್ರೆ ನಿರಂತರವಾಗಿ ಮುಂದುವರೆದು, ೭೫ನೇ ವಯಸ್ಸಿನಷ್ಟು ಹೊತ್ತಿಗೆ ಸುಮಾರು ೬೦ಕ್ಕೂ ಹೆಚ್ಚು ಕೃತಿಗಳನ್ನು ಸಮೃದ್ಧವಾಗಿ ನೀಡಿದರು.

ಮಲೆನಾಡಿನಲ್ಲಿ ಹುಟ್ಟಿಬೆಳೆದ ಇಂದಿರಾ ಅಲ್ಲಿನ ಜನಜೀವನವನ್ನು, ಕಷ್ಟ– ಸುಖಗಳನ್ನು ಅತ್ಯಂತ ಸೂಕ್ಷ್ಮವಾಗಿಯೂ ಗಂಭೀರವಾಗಿಯೂ ಅವಲೋಕಿಸಿರುವುದೇ ಅಲ್ಲದೆ ಅದೆಲ್ಲವನ್ನೂ ತಮ್ಮ ಸೃಜನಶೀಲ ಪ್ರಜ್ಞೆಯ ಅಂತರ್ಗತ ಭಾಗವಾಗಿಸಿ ಕೊಂಡಿದ್ದಾರೆ.ಆದ್ದರಿಂದಲೇ ತಮ್ಮ ಕಾದಂಬರಿಗಳಲ್ಲಿ, ಅಲ್ಲಿನ ಪರಿಸರ, ಪ್ರಾಕೃತಿಕ ಪರಿಸರದೊಂದಿಗಿನ ಮನುಷ್ಯರ ಆತ್ಮೀಯ ಸಂಬಂಧಗಳು ಒಡನಾಟಗಳು ಅತ್ಯಂತ ಸಹಜವಾಗಿ ವರ್ಣಿಸುತ್ತಾರೆ.ಪ್ರಕೃತಿಯ ಸಣ್ಣ ಸಣ್ಣ ವಿವರಗಳನ್ನೂ, ಋತುಮಾನದ ಬದಲಾವಣೆಗಳೊಂದಿಗೆ ಪ್ರಕೃತಿಯಲ್ಲಿ ಕಾಣಿಸಿಕೊಳ್ಳುವ ಬದಲಾವಣೆಗಳನ್ನು ನೈಜವಾಗಿ, ಸುಂದರವಾಗಿ ವಿವರಿಸುತ್ತಾರೆ.ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುವ ಭಾಷಾ ವೈವಿಧ್ಯವೂ, ಪ್ರಾದೇಶಿಕ ವೈಶಿಷ್ಟಗಳೊಂದಿಗೆ ಬಳಸುವುದರ ಮೂಲಕ ಅಚ್ಚರಿ ಹುಟ್ಟಿಸುತ್ತಾರೆ.

ಇಂದಿರಾ ಅವರು ೬೦ಕ್ಕೂ ಹೆಚ್ಚು ಕೃತಿಗಳನ್ನು ಬರೆದಿದ್ದರೂ, 'ತುಂಗ–ಭದ್ರ', 'ಸದಾನಂದ', 'ಫಣಿಯಮ್ಮ', 'ಗೆಜ್ಜೆಪೂಜೆ', 'ತಪೋವನ' ಇತ್ಯಾದಿ ಒಂದೇಳೆಂಟು ಕಾದಂಬರಿಗಳು ಜನಪ್ರಿಯತೆಯ ಪರಾಕಾಷ್ಠೆಗೆ ತಲುಪುವಂತೆ ಮಾಡಿವೆ. 'ಶರಪಂಜರ'ದ ಮೂಲಕ ತ್ರಿವೇಣಿ ಖ್ಯಾತಿಯ ಶಿಖರ ತಲುಪಿದಂತೆ, 'ಗೆಜ್ಜೆಪೂಜೆ' ಮೂಲಕ ಇಂದಿರಾ ಅವರೂ ಕೂಡಾ ಅಷ್ಟೇ ಜನಪ್ರಿಯತೆಯನ್ನು ಪಡೆದರು. ಈ ಎರಡೂ ಕಾದಂಬರಿ 'ಚಲನಚಿತ್ರ' ಇತಿಹಾಸದಲ್ಲಿ ದಾಖಲೆ ಸ್ಥಾಪಿಸಿದವು.

ಇಂದಿರಾ ಅವರು ಬರಹವನ್ನು ಆರಂಭಿಸಿದ್ದೇ ಮೂವತ್ತೈದು ವಯಸ್ಸಿನ ನಂತರ. ಅದೃಷ್ಟವೆಂಬಂತೆ ತುಂಗ–ಭದ್ರ, ಸದಾನದ ಎರಡೂ ಕಾದಂಬರಿಗಳು ಮರುಮುದ್ರಣಗಳನ್ನು ಕಾಣುವುದರ ಮೂಲಕ ಇತಿಹಾಸವನ್ನೇ ಸೃಷ್ಟಿಸಿದರು. ಸದಾನಂದ ಕಾದಂಬರಿ. ವಿಮರ್ಶಾತ್ಮಕ ನೆಲೆಯಲ್ಲಿ ಕೆಲವು ಕೊರತೆಗಳನ್ನು, ಅಸಹಜತೆಯನ್ನು ಕಾಣುವಂತಿದ್ದರೂ ಒಟ್ಟಾರೆಯಾಗಿ ಅತ್ಯಂತ ಆಪ್ತವಾಗಿ ಓದಿಸಿಕೊಂಡು ಹೋಗುವ ಗುಣವನ್ನು ಹೊಂದಿದೆ.ವಾಸ್ತವವಾಗಿ, ಕಾದಂಬರಿಯ ಶೀರ್ಷಿಕೆಯ ಪಾತ್ರವಾದ ಸದಾನಂದನ ಪ್ರವೇಶವಾಗುವುದೇ ಅರ್ಧಕಾದಂಬರಿ ಮುಗಿದ ನಂತರ. **ಮುಂದುವರಿಯುವುದು**

ಅವಲೋಕನ – ಪುಸ್ತಕದ ಕಿರು ವಿಮರ್ಶೆ

# ಚಿಂತನೆ – ಕ್ಷಿಪ್ರಗತಿ ಹಾಗೂ ಮಂದಗತಿ

## Daniel Kahneman's book “Thinking , fast and slow

– ಬಿ.ಆರ್. ರವೀಂದ್ರನಾಥ್

ಈ ಪುಸ್ತಕದ ವಸ್ತುವಿಷಯ ಕ್ಷಿಪ್ರಗತಿ ಚಿಂತನೆ ಹಾಗೂ ಮಂದಗತಿ ಚಿಂತನೆ-- ಇವುಗಳ ನಡುವಿನ ವ್ಯತ್ಯಾಸವನ್ನು ಗುರುತಿಸುವುದು. ಈ ಪುಸ್ತಕದ ಲೇಖಕ ಮನೋಶಾಸ್ತ್ರಜ್ಞ ಹಾಗೂ ವರ್ತನೆ ಅರ್ಥಶಾಸ್ತ್ರಜ್ಞರಾಗಿದ್ದು ಇವರಿಗೆ ೨೦೦೨ರಲ್ಲಿ ನೊಬೆಲ್ ಪ್ರಶಸ್ತಿ ಲಭಿಸಿತು. ಡೇನಿಯಲ್ ಕಾನ್ಹೇಮನ್ ದೋಷಯುಕ್ತ ನಿರ್ಧಾರಗಳು ಹಾಗೂ ಲಭ್ಯವಿರುವ ಅವಕಾಶಗಳ ಬಗ್ಗೆ ಚರ್ಚೆ ಮಾಡಿರುತ್ತಾರೆ. ನಮ್ಮ ಭಾವನೆಗಳು, ಸಾಕ್ಷಾತ್ಕಾರ, ಅನಿಸಿಕೆ ಹಾಗೂ ಭಾವನೆಗಳ ಆಧಾರದ ಮೇಲೆ ನಮ್ಮ ಮನಸ್ಸಿನಲ್ಲಿ ಸೃಷ್ಟಿಗೊಳ್ಳುವ ಪಕ್ಷಪಾತಗಳ ಬಗ್ಗೆ ಲೇಖಕರು ಚರ್ಚೆ ಮಾಡುತ್ತಾರೆ. ಉದಾಹರಣೆಗೆ ಒಂದು ಸಮೀಕ್ಷೆಯ ಪ್ರಕಾರ ಅರ್ಬುದ ರೋಗವು ಅತ್ಯಧಿಕ ಸಂಖ್ಯೆಯಷ್ಟು ಜನರ ಸಾವಿಗೆ ಕಾರಣ ಎಂದು ಬಹಳಷ್ಟು ಜನರು ಮಾಧ್ಯಮಗಳ ವರದಿಯ ಆಧಾರದ ಮೇಲೆ ನಂಬಿದ್ದರು. ವಾಹನ ಚಾಲನೆ ಕೌಶಲಗಳ ಬಗ್ಗೆ ನಡೆದ ಸಮೀಕ್ಷೆಯಲ್ಲಿ ತಾವು ತಕ್ಕ ಮಟ್ಟಿಗೆ ಉತ್ತಮ ವಾಹನ ಚಾಲನಾ ಕೌಶಲ್ಯವುಳ್ಳವರು ಎಂದು ಬಹುತೇಕ ಎಲ್ಲರೂ ನಂಬಿದ್ದರು. ಇಂತಹ ಫಲಿತಾಂಶಗಳಿಗೆ ಅಂಕಿ ಅಂಶಗಳ ಆಧಾರವಿರುವುದಿಲ್ಲ. ಸಮೀಕ್ಷೆಗಳ ಮೂಲಕ ಸಂಗ್ರಹಿಸಲಾದ ಹಲವಾರು ಇಂತಹ ಜೀವಂತ ಉದಾಹರಣೆಗಳ ಮೂಲಕ ಉತ್ತಮ ಗುಣಮಟ್ಟದ ನಿರ್ಧಾರಗಳನ್ನು ಸಾಧಿಸಲು ವಾಸ್ತವ ಅನುಭವದಿಂದ ಹಾಗೂ ಎಲ್ಲಿಯೋ ಕೇಳಿಸಿಕೊಂಡಿರುವ ಅಥವಾ ಓದಿರುವುದನ್ನ ಆಧರಿಸಿ ಮಾತನಾಡುವುದಕ್ಕೂ ಸಾಕ್ಷಾತ್ಕಾರ ಅಥವಾ ಸ್ವಯಂಪ್ರೇರಿತ ಪ್ರತಿಕ್ರಿಯೆಗಳು ಹಾಗೂ ಶ್ರಮ ವಹಿಸಿ ಸಾಧ್ಯವಾದ ವಿಶ್ಲೇಷಿತ ಮತ್ತುಚಿಂತನೆಗೆ ಒಳಪಟ್ಟ ಪ್ರತಿಕ್ರಿಯೆಗಳ ನಡುವೆ ವ್ಯತ್ಯಯಗಳನ್ನು ಗುರುತಿಸಬೇಕಾಗಿರುತ್ತದೆ. ಲೇಖಕರು ಪ್ರತಿಪಾದಿಸಿರುವ “ಯೋಜನೆಗಳ ತರ್ಕಾದೋಷ”, “ಅಂಕಿ ಅಂಶಗಳ ಚಿಂತನೆ” ಹಾಗೂ “ನಿಯಂತ್ರಣದ ಭ್ರಮೆ” ಪರಿಕಲ್ಪನೆಗಳು ಓದುಗನನ್ನು ಚಿಂತನೆಗೆ ಹಚ್ಚಿ ಓದುಗನು ತನ್ನ ಜೀವನದಲ್ಲಿ ಕೈಗೊಂಡಿರುವ ಪ್ರಮುಖ ನಿರ್ಧಾರಗಳನ್ನು ಮತ್ತೊಮ್ಮೆ ಪರಿಶೀಲಿಸುವಂತೆ ಮಾಡಬಹುದು. ನಾವು ಬಹು ಮಟ್ಟಿಗೆ ಪ್ರಪಂಚದ ಬಗ್ಗೆಯ ನಮ್ಮ ಅರಿವಿಗೆ ಅತಿ ಹೆಚ್ಚು ಮಹತ್ವಕೊಡುತ್ತೇವೆ ಹಾಗೂ ಬಹುತೇಕ ಪ್ರಸಂಗಗಳಲ್ಲಿ ಆಕಸ್ಮಿಕಗಳ ಪಾತ್ರವನ್ನು ಕೀಳರಿಮೆಯಿಂದ ಕಾಣುತ್ತೇವೆ ಎಂಬುದು ಓದುಗನನ್ನು ದಿಗ್ಭ್ರಮೆಗೊಳಿಸುತ್ತದೆ. ಯಾವುದೇ ಸಂಸ್ಥೆಯಲ್ಲಿಯೂ ಸಂಸ್ಥೆಯ ಪರವಾಗಿ ನಿರ್ಧಾರಗಳನ್ನು ಕೈಗೊಳ್ಳುವಲ್ಲಿ ಗುಣಮಟ್ಟಗಳನ್ನು ಸುಧಾರಿಸಬೇಕೆಂದು ಪ್ರತಿ ಸಂಸ್ಥೆಯೂ ಆಶಿಸುತ್ತದೆ. ಇತರರ ಪ್ರತಿಕ್ರಿಯೆಗಳ ಬಗ್ಗೆ ಒಳನೋಟ ಪಡೆಯಲು ಈ ಪುಸ್ತಕ ಸಹಾಯಕವಾಗಿರುತ್ತದೆ. ಕಾನ್ಹೇಮನ್‌ಅವರು ವ್ಯವಹಾರಗಳು, ಸಮೀಕ್ಷೆಗಳು ಹಾಗೂ ಸಮೀಕ್ಷೆಗಳ ಫಲಿತಾಂಶಗಳನ್ನು ಅರ್ಥೈಸುವುದನ್ನು ಸ್ವಾರಸ್ಯವಾಗಿ ವಿವರಿಸಿರುತ್ತಾರೆ. ಅವರ ಪರಿಕಲ್ಪನೆಗಳ ಮೂಲಕ ತಕ್ಷಣವೇ ಪ್ರತಿಕ್ರಿಯೆಗಳನ್ನು ಪ್ರಕಟಗೊಳಿಸುವವರು ನಮಗೆ ಯಾಕೆ ಪ್ರಿಯರಾಗುತ್ತಾರೆ ಎಂಬುದನ್ನೂ ವಿವರಿಸಲಾಗಿದೆ.

ಈ ಪುಸ್ತಕ ಸಂಸ್ಥೆಗಳ ಮುಖ್ಯಸ್ಥರಿಗೂ ವ್ಯಕ್ತಿಗಳಿಗೂ ಬಹಳ ಉಪಯುಕ್ತ ಪುಸ್ತಕವಾಗಿರುತ್ತದೆ.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2018-2020
dt. 27-10-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-04-2018

## ಪ್ರಕಟಣೆ

ತಾಳೆಗರಿ/ ಓಲೆಗರಿ, ಕಾಗದದ ಮೇಲೆ ಬರೆದ ಪ್ರಾಚೀನ ಹಸ್ತಪ್ರತಿಗಳು, ಕಡತಗಳು ದೇಶದ ಅಮೂಲ್ಯವಾದ ಅಸ್ತಿ ಮತ್ತು ಸಂಪತ್ತು. ಭಾರತ ಸರ್ಕಾರವು ಅವುಗಳನ್ನು ಉಳಿಸಿಕೊಳ್ಳುವ ಮಹತ್ತರ ಕಾರ್ಯವನ್ನು ಕೈಗೊಂಡಿದೆ. (National Mission for Manuscripts, New Delhi) ಈ ನಿಟ್ಟಿನಲ್ಲಿ ಬೆಂಗಳೂರಿನಲ್ಲಿರುವ ಬಿ.ಎಂ.ಶ್ರೀ.ಪ್ರತಿಷ್ಠಾನವು ಸಂರಕ್ಷಣಾ ಕಾರ್ಯವನ್ನು ನಿರ್ವಹಿಸುತ್ತಾ ಬರುತ್ತಿದೆ.ಇಂತಹ ಮೌಲಿಕ ದಾಖಲೆಗಳು ನಾಶವಾಗುವುದನ್ನು ತಪ್ಪಿಸಲು, ಬಿ.ಎಂ.ಶ್ರೀ ಪ್ರತಿಷ್ಠಾನವು ಸಾರ್ವಜನಿಕರು, ಮಠಮಾನ್ಯಗಳು, ಗುರುಕುಲಗಳು, ಅರಮನೆ, ಗುರುಮನೆಗಳು, ವಿದ್ಯಾಸಂಸ್ಥೆಗಳು ಹೊಂದಿರಬಹುದಾದ ತಾಳೆಗರಿ ಗ್ರಂಥಗಳ ಮತ್ತು ಪ್ರಾಚೀನ ಹಸ್ತಪ್ರತಿಗಳ ಸಂರಕ್ಷಣೆ ಬಗ್ಗೆ ಅರಿವನ್ನು ಮೂಡಿಸುತ್ತದೆ.(Preventive maintenance).ಸಂರಕ್ಷಣಾ ಸೇವೆ ಹಾಗೂ ಗ್ರಂಥಸೂಚಿ ತಯಾರಿಕೆ ಸೇವೆಗಳನ್ನೂ ನೀಡಲಾಗುವುದು. ಆಸಕ್ತರು ಈ ಸೇವೆಯ ಸದುಪಯೋಗ ಪಡೆಯಲು ಸಂಪರ್ಕಿಸಿ:

ಶ್ರೀ ಬಿ.ಎಸ್. ಗುರುಪ್ರಸಾದ್, ಸಂಯೋಜಕರು, ಹಸ್ತಪ್ರತಿ ವಿಭಾಗ,

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ೩ನೇ ಮೇನ್, ನರಸಿಂಹರಾಜ ಕಾಲೊನಿ,

ಬಸವನಗುಡಿ, ಬೆಂಗಳೂರು –೫೬೦೦೧೯.

ಕಛೇರಿ ಸಮಯ: ಮಧ್ಯಾಹ್ನ ೧೨–೩೦ರಿಂದ ಸಂಜೆ ೭–೦೦ಗಂಟೆ.

ವಾರದ ರಜೆ: ಮಂಗಳವಾರ

ದೂರವಾಣಿ :೦೮೦–೨೬೬೧೫೮೭೭,
ಮೊಬೈಲ್–೯೫೩೫೧೯೭೩೩೭

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 ‘C’ Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ...........................................................................................

...........................................................................................................

...........................................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭